# ಮುನ್ನುಡಿ

೧

'ಬಾವುಟ' ಎಂಬುದು ಒಂದು ಪವಿತ್ರವಾದ ವಸ್ತ್ರವಿಶೇಷ. ಈ ವಸ್ತ್ರ ವರ್ಣವಂತವಾಗಿರುತ್ತದೆ, ಅದರ ಮೇಲೆ ಯಾವುದಾದರೂ ಚಿಹ್ನೆಗಳನ್ನು ಚಿತ್ರಿಸಿರುತ್ತಾರೆ. ಈ ಬಣ್ಣಗಳಿಗೂ ಚಿಹ್ನೆಗಳಿಗೂ ನಿಷ್ಕೃಷ್ಟವಾದ ಅರ್ಥವಿರುತ್ತದೆ. ಬಾವುಟಗಳು ಕಣ್ಣಿಗೆ ಸುಂದರವಾಗಿರಬೇಕು ಎಂಬುದಲ್ಲದೆ ಅವು ಭಾವಪೂರ್ಣವಾಗಿಯೂ ಇರಬೇಕು.

ಪ್ರಪಂಚದಲ್ಲಿ ಸ್ವತಂತ್ರ ಎನ್ನಿಸಿರುವ ದೇಶಗಳೆಲ್ಲಾ ತಮ್ಮ ತಮ್ಮ ಸ್ವಂತ ಬಾವುಟಗಳನ್ನು ಹೊಂದಿವೆ. ಅರ್ಥ ಸರಿಯಾಗಿ ಗೊತ್ತಿಲ್ಲದಿದ್ದರೂ ನಮ್ಮಲ್ಲಿ ಅನೇಕರು ಆ ಬಾವುಟಗಳನ್ನು ಕಂಡೊಡನೆಯೆ ತತ್ಸಂಬಂಧವಾದ ದೇಶಗಳನ್ನು ನೆನಪುಮಾಡಿಕೊಳ್ಳುತ್ತೇವೆ. ಇಂಗ್ಲೆಂಡಿನ ಯೂನಿಯನ್ ಜಾಕ್, ಅಮೆರಿಕದ ಪಟ್ಟೆಪಟ್ಟೆಗಳೂ ನಕ್ಷತ್ರಗಳು, ರಷ್ಯದ ಸುತ್ತಿಗೆ ಕುಡುಗೋಲು, ಬಿದ್ದ ಜರ್ಮನಿಯ ಸ್ವಸ್ತಿಕ, ಫ್ರಾನ್ಸಿನ ತ್ರಿವರ್ಣ—ಈ ಬಾವುಟಗಳ ಗುರುತಿಲ್ಲದವರಾರು! ನಮಗಾದರೂ ನೆನ್ನೆಯ ವರುಷದವರೆಗೆ ಇಂಗ್ಲೆಂಡಿನ ಯೂನಿಯನ್ ಜಾಕನ್ನೇ ಒತ್ತಾಯದಿಂದ ತಲೆಯಮೇಲೆ ಹಿಡಿದಿದ್ದರು. ದೇಶ ಸ್ವತಂತ್ರವಾಗಿರುವಾಗ ಈಗ ನಮ್ಮ ಸ್ವಂತ ಧ್ವಜ ನಮಗೆ ಬಂದಿದೆ. ಇದನ್ನು ನಮ್ಮ ದೇಶದಲ್ಲಿ ನಾವು ಯಾರ ಅಡ್ಡಿಆತಂಕಗಳೂ ಇಲ್ಲದೆ ಬೇಕಾದ ಹಾಗೆ ಗಗನಕ್ಕೆ ಏರಿಸಬಹುದು. ಎಲ್ಲೆಲ್ಲಿ ನಮ್ಮ ರಾಯಭಾರಿಗಳು ಹೋಗುವರೋ, ಎಲ್ಲೆಲ್ಲಿ ನಮ್ಮ ಹಡಗುಗಳು ಹೋಗುವುವೋ, ಎಲ್ಲೆಲ್ಲಿ ನಮ್ಮ ವಿಮಾನಗಳು ಹಾರುವುವೋ ಅಲ್ಲೆಲ್ಲ ಈ ಧ್ವಜ ನಮ್ಮ ದೇಶದ ಪ್ರತಿನಿಧಿಯಾಗಿ ವಿರಾಜಿಸುವುದು.

ಈಹೊತ್ತಿನ ದಿವಸ ಸ್ವತಂತ್ರವಾದ ಈ ರಾಷ್ಟ್ರಕ್ಕೆ ಒಂದು ಧ್ವಜವಿರುವ ಹಾಗೆ, ಇಲ್ಲಿನ ಹಲವು ಸಂಸ್ಥಾನಗಳಿಗೆ ತಮ್ಮದೇ ಕುಲಕ್ರಮಾಗತವಾದ ಪ್ರತ್ಯೇಕ ಧ್ವಜಗಳಿರುವಹಾಗೆ, ಹಿಂದಿನ ಕಾಲದಲ್ಲಿ ಸಣ್ಣಪುಟ್ಟ ಪಾಳಯಪಟ್ಟುಗಳಿಗೂ ಒಂದೊಂದು ಅದರದೇ ಧ್ವಜವಿರುತ್ತಿತ್ತು. ಅದಕ್ಕೂ ಹಿಂದಿನ ಕಾಲದಲ್ಲಿ ಪ್ರತಿಯೊಬ್ಬ ವೀರನಿಗೂ ಒಂದೊಂದು ವೈಯಕ್ತಿಕವಾದ ಬಾವುಟವಿರುತ್ತಿದ್ದಿತು.

ಮಹಾಭಾರತದ ವಿರಾಟಪರ್ವದಲ್ಲೂ ಭೀಷ್ಮಪರ್ವದ ಪ್ರಾರಂಭದಲ್ಲೂ ಕಾಣುವ ಯುದ್ಧಭೂಮಿಯ ವರ್ಣನೆಯಲ್ಲಿ ಭೀಷ್ಮನಿಗೆ ಐದು ನಕ್ಷತ್ರಗಳ ಗುರುತುಳ್ಳ ತಾಳ ಧ್ವಜವಿದ್ದಿತಂತೆ; ಅಶ್ವತ್ಥಾಮನದು ಸಿಂಹಧ್ವಜ; ಕೃಪನದು ವೃಷಭಧ್ವಜ; ಜಯದ್ರಥನದು ವರಾಹಧ್ವಜ; ಅಭಿಮನ್ಯುವಿನದು ಕರ್ಣಿಕಾರಧ್ವಜ; ಕರ್ಣನಿಗೆ ಆನೆಗಳನ್ನು ಕಟ್ಟಿಹಾಕುವ ಸರಪಣಿಯ ಗುರುತಿನ ಧ್ವಜ; ದ್ರೋಣನಿಗೆ ಸುವರ್ಣಮಯವಾದ ಕಮಂಡಲುವಿನಿಂದಲೂ ಧನುಸ್ಸಿನಿಂದಲೂ ಅಲಂಕೃತವಾದ ವೇದೀಧ್ವಜ; ಇನ್ನೂ ಹೀಗೆಯೇ. ನಮ್ಮ ಚರಿತ್ರೆಯ ಕೆಲವು ಪ್ರಸಿದ್ಧವಾದ ಬಾವುಟಗಳನ್ನು ಇದೇ ಪುಸ್ತಕದ ೨೭ ನೇ ಪುಟದಲ್ಲಿ ಕಾಣಬಹುದು.

ಮಹಾಭಾರತದಲ್ಲಿ ನಾವು ಕಾಣುವ ಧ್ವಜಗಳು ಸುವರ್ಣಧ್ವಜಗಳೆಂದೂ ರಜತಧ್ವಜಗಳೆಂದೂ ವರ್ಣಿತವಾಗಿವೆ. ಬರುತ್ತ ಬರುತ್ತ ಈ ಧ್ವಜಗಳು ಚಿನ್ನಬೆಳ್ಳಿಯಿಂದ ಇತರ ಲೋಹಗಳಿಗೆ ಇಳಿದು, ಕ್ರಮೇಣ ಬಣ್ಣದ ಹಲಗೆಗಳಾಗಿ ಹರಡಿಕೊಂಡು, ಈಗ ಸರ್ವತ್ರ ಬಳಕೆಯಾಗುವ ಕಾರಣದಿಂದ ಅನುಕೂಲಕ್ಕೋಸ್ಕರವಾಗಿ ವಸ್ತ್ರವಾಗಿ ಪರಿಣಮಿಸಿವೆ.

ಅದು ಹೇಗೇ ಇರಲಿ, ಧ್ವಜದ ಪಟಕ್ಕಾಗಿ ಬಳಸುವ ವಸ್ತು ಚಿನ್ನವೇ ಆಗಿರಲಿ ಬಟ್ಟೆಯೇ ಆಗಿರಲಿ, ಅದು ಮುಖ್ಯವಲ್ಲ; ಧ್ವಜಕ್ಕೆ ಬೆಲೆ ಬರುವುದು ಅದನ್ನು ಎತ್ತಿ ಹಿಡಿಯುವವರು ಹೊಂದಿರುವ ಉದ್ದೇಶದ ಹಿರಿಮೆಯಿಂದ, ಆ ಉದ್ದೇಶವನ್ನು ಸಾಧಿಸಿ ರಕ್ಷಿಸಿಕೊಳ್ಳುವುದಕ್ಕಾಗಿ ಅವರು ನಡಸುವ ಅಪ್ರಮಾದದಿಂದ, ದೃಢವಾದ ಪರಾಕ್ರಮದಿಂದ.

ಈಗ ತನ್ನದೇ ಆದ ಧ್ವಜವನ್ನು ಗಳಿಸಿಕೊಂಡಿರುವ ಈ ದೇಶವಾದರೂ ಈ ಧ್ವಜಕ್ಕೆ ಮನ್ನಣೆಯನ್ನು ಸಂಪಾದಿಸಿರುವುದು ತನ್ನ ಹಲವಾರು ವರ್ಷಗಳ ಅಪ್ರಮತ್ತವಾದ ದೃಢಪರಾಕ್ರಮದಿಂದಲೇ. ಈ ಧ್ವಜದ ನಡುವಿನ ಚಕ್ರವನ್ನು ನೋಡಿ ಇದು ಹೊಸಧ್ವಜ ಎನ್ನಬಹುದಾದರೂ ಕಳೆದ ಇಪ್ಪತ್ತೈದು ವರುಷಗಳಿಂದ ಯಾವ ಧ್ವಜದ ಅಡಿಯಲ್ಲಿ ಈ ದೇಶ ಸ್ವಾತಂತ್ರ್ಯಸಮರವನ್ನು ನಡೆಸಿತೋ ಅದೇ ಚರಖ ಧ್ವಜವೇ ಇದು—ಎಂಬುದಾಗಿ ಈ ಧ್ವಜಕ್ಕೆ ರಾಷ್ಟ್ರಸಭೆಯ ಸಮ್ಮತಿಯನ್ನು ಅಂಕಿಸುವ ಸಂದರ್ಭದಲ್ಲಿ ಪಂಡಿತ ನೆಹರು ಅವರು ಹೇಳಿದರು. ಆ ಹೋರಾಟದಲ್ಲಿ ಜನ

ಇಟ್ಟುಕೊಂಡ ಗುರಿ, ಅದಕ್ಕಾಗಿ ಅದರ ರಕ್ಷಣೆಗಾಗಿ ಅದರ ಸಾಧನೆಗಾಗಿ ಜನ ಮಾಡಿದ ಮಹಾತ್ಯಾಗ—ಇವು ಈ ಧ್ವಜದ ಅರ್ಥವನ್ನು ಹೆಚ್ಚಿಸಿವೆ.

೨

**ಹಸಿರು-ಬಿಳುಪು-ಕೇಸರಿ** ಎಂಬ ತ್ರಿವರ್ಣಗಳನ್ನು ಮೈಗೂಡಿಸಿಕೊಂಡದ್ದು ನಮ್ಮ ಈ ಧ್ವಜ. ಹಿಂದೆ ಈ ಧ್ವಜದ ಮಧ್ಯದಲ್ಲಿ ಬಿಳಿಯ ಒಡಲಿನ ನಡುವೆ **ದರಿದ್ರ ನಾರಾಯಣನ ಕೈಯ ಚರಖ** ಇತ್ತು. ಈಗ ಅದೇ ಚರಖದ ಮುಖ್ಯಾಂಗವಾದ **ಚಕ್ರ**—ಶುಕ್ಲಾಂಬರಧಾರಿಯಾದ ಶ್ರೀಮನ್ನಾರಾಯಣನ ವಿಶಾಲವಾದ ವಕ್ಷಃಸ್ಥಲ ದಲ್ಲಿರುವ ಶ್ರೀವತ್ಸಲಾಂಛನದಂತೆ, ಸಕಲಲೋಕಸಂಹಾರಕವಾದ ಹಾಲಾಹಲವಿಷ ವನ್ನು ಸಮಸ್ತಲೋಕಹಿತಕ್ಕೋಸ್ಕರ ತಾನೇ ಕುಡಿದ ಆ ಧವಲದೇಹಿ ಸದಾಶಿವ ಶಂಕರನ ಕೊರಳಿನ ನೀಲಿಮೆಯಂತೆ—ಈಗ ಈ **ಚಕ್ರ**ವು ಧ್ವಜದ ಹೃದಯಸ್ಥಾನದಲ್ಲಿ ಶ್ವೇತಮಾಧ್ಯಮದ ನಡುವೆ **ನೀಲವರ್ಣ**ದಲ್ಲಿ ಅಚ್ಚುಪಡೆದು ನಿಂತಿದೆ.

ಈ ಧ್ವಜದಲ್ಲಿನ ಮೂರು ಬಣ್ಣಗಳಿಗೆ ಏನು ಅರ್ಥವೆಂಬುದು ಹೆಚ್ಚುಕಡಿಮೆ ಎಲ್ಲರಿಗೂ ತಿಳಿದೇ ಇದೆ. ಅದರಂತೆಯೇ ಚರಖ ಚಿಹ್ನೆಯ ಅರ್ಥವಾದರೂ. ಆದರೆ ಈ ಹೊಸ 'ಚಕ್ರ'ದ ಅರ್ಥ ಮಾತ್ರ ಚರಖವೆಂಬುದಕ್ಕಿಂತ ಹೆಚ್ಚಿನ ವ್ಯಾಪ್ತಿ ಯುಳ್ಳದ್ದು.

ಈ 'ಚಕ್ರ'ವನ್ನು '**ಅಶೋಕಚಕ್ರ**'ವೆಂದು ಕರೆದಿರುವುದರಲ್ಲಿ ಎರಡು ಅರ್ಥ ಅಡಗಿಕೊಂಡಿದೆ. ಅಶೋಕನೆಂಬ ರಾಜನ ಹೆಸರಿನೊಡನೆ ಪ್ರಸಿದ್ಧವಾದ ಚಕ್ರವೆಂದಾ ದರೂ ಸರಿಯೆ, ಅಥವಾ ಶೋಕವಿಲ್ಲದ ಅಶೋಕಸ್ಥಿತಿಯ ನಿರಂತರವಾದ ಚಕ್ರವೆಂದಾ ದರೂ ಸರಿಯೆ—ಹೇಗೆ ಅರ್ಥಮಾಡಿಕೊಂಡರೂ, ಚಕ್ರವೆಂಬುದಕ್ಕೆ ಹತ್ತಿಕೊಂಡಿ ರುವ ಹಿರಿಮೆ '**ಅಶೋಕ**'ವೆಂಬುದರ ಸಂಪರ್ಕದಿಂದ ಮತ್ತಷ್ಟು ವಿಶಾಲವಾಗುತ್ತದೆ.

ಅದರಲ್ಲೂ ಈ ಚಕ್ರವನ್ನು "**ಸಾರನಾಥದಲ್ಲಿ ಅಶೋಕರಾಜನು ನಿಲ್ಲಿಸಿದ ಕಲ್ಲುಕಂಬದ ತುದಿಯಲ್ಲಿದ್ದ ಸಿಂಹಶೀರ್ಷದ ನಡುವಿನ ಶಿಲಾಪೀಠದಿಂದ ತೆಗೆದು ಕೊಂಡ ಚಕ್ರ**"ವೆಂದು ನಿರ್ದೇಶಿಸಿರುವ ಕಾರಣದಿಂದ, ಈ ನಿರ್ದಿಷ್ಟವಾದ ಚಕ್ರದ ಸುತ್ತುಮುತ್ತುಗಳ ನಿಮಿತ್ತದಿಂದ, 'ಅಶೋಕಚಕ್ರ'ದ ಅರ್ಥಸಂಪದವು ಅನ್ಯಾ ದೃಶವಾಗಿದೆ.

ಈ ಅರ್ಥಸಂಪದವನ್ನು ಕಾಣಬೇಕಾದರೆ—ಸಾರನಾಥ ಎಂಬುದು ಏನು, ಅಲ್ಲಿದ್ದ ಸ್ತಂಭದ ಮಹಿಮೆಯೇನು, ಅದರ ತುದಿಯ ಸಿಂಹಶೀರ್ಷದ ರಚನೆ ಎಂತಹದು, ಆ ಶೀರ್ಷದ ನಡುವಿನ ಶಿಲಾಪೀಠದ ಅರ್ಥವೇನು, ಆ ಶಿಲಾಪೀಠದಲ್ಲಿರುವ ಚಕ್ರ ಎಂಬುದು ಯಾವುದು—ಈ ಎಲ್ಲದರ ಪರಿಚಯವಾಗಬೇಕು.

ಆ ಅಶೋಕಸ್ತಂಭದ, ಅದರ ಮೇಲಿನ ಅಲಂಕಾರದ ಪೂರ್ಣಸ್ವಾರಸ್ಯ ಗೊತ್ತಾಗಬೇಕಾದರೆ ಈ ಕಂಬವನ್ನು ಎತ್ತಿಸಿದ ಅಶೋಕನೂ ಅವನಿಗೆ ಸ್ಫೂರ್ತಿಕೊಟ್ಟ ಬುದ್ಧನೂ ಯಾವುದಕ್ಕಾಗಿ ಬದುಕಿ ದುಡಿದರೋ ಅದರ ಪರಿಚಯವಾಗಬೇಕು.

ಇದರ ಜೊತೆಗೆ, ಈ ಹೊಸ ರಾಷ್ಟ್ರಧ್ವಜದ ತುಂಬುಹಿರಿಮೆ ಗೋಚರವಾಗಬೇಕಾದರೆ, ಇದು ರೂಪುಗೊಳ್ಳುವುದಕ್ಕೆ ಮೊದಲು ನಾಡಿನ ಜನರ ಮನಸ್ಸುಗಳಿಂದ ಹುಟ್ಟಿಬಂದ ಹಲವು ತಾತ್ಕಾಲಿಕ ರಾಷ್ಟ್ರಧ್ವಜಗಳ ಪರಿಚಯವಾಗಬೇಕು, ಅವುಗಳ ಬೆಳೆವಣಿಗೆಯ ಕಥೆಯನ್ನು ತಿಳಿಯಬೇಕು.

'**ಸಾರನಾಥ**' ಎಂದುದರಿಂದ—ವಿವಿಧವಾದ ಮತಗಳ ಅನ್ಯೋನ್ಯತಾಭಾವವನ್ನೂ ;

'ಸಾರನಾಥದ **ಶಿಲಾಸ್ತಂಭ**' ಎಂದುದರಿಂದ—ಯಾವ ಸಂಘವು ಉಳಿಯಬೇಕಾದರೂ ಇದ್ದೇ ತೀರಬೇಕಾದ ಐಕ್ಯತೆಯನ್ನೂ ;

'ಆ ಸ್ತಂಭದ ತುದಿಯ **ಸಿಂಹಶೀರ್ಷ**' ಎಂದುದರಿಂದ—ಬೆನ್ನಿಗೆ ಬೆನ್ನಿಟ್ಟು, ಪರಸ್ಪರವಾಗಿ ಬಲಕೊಟ್ಟು ಕೊಳ್ಳುವ ಸಹಕಾರವನ್ನೂ, ಧರ್ಮದಲ್ಲಿ ಊರಿ ನಿಲ್ಲುವುದರಿಂದ ಬರುವ ದೃಢಸ್ಥಿತಿಯನ್ನೂ ;

'ಆಶೀರ್ಷದಡಿಯ **ಶಿಲಾಪೀಠ**' ಎಂದುದರಿಂದ—ಧರ್ಮಕ್ಕೂ ಧರ್ಮಿಗೂ ಇರುವ ಕಡಿಯಲಾರದ ಸಂಬಂಧವನ್ನೂ ;

'ಆ ಪೀಠದೊಳಗಿನ **ಚಕ್ರ**' ಎಂದುದರಿಂದ—ಬದುಕು ಸಾಧಿಸಬೇಕಾದ ಪೂರ್ಣತೆಯನ್ನೂ ಅದಕ್ಕಾಗಿ ಕೊನೆಮೊದಲಿಲ್ಲದೆ ನಡಸಬೇಕಾದ ಪರಾಕ್ರಮವನ್ನೂ ;

'**ಅಶೋಕ**' ಎಂದುದರಿಂದ ನಮ್ಮ ಹಿಂದಿನ ಸಿದ್ಧಿಯನ್ನೂ ಮುಂದೆ ನಾವು ಸಾಧಿಸಬೇಕಾದುದನ್ನೂ ;

—ಈ '**ಅಶೋಕಚಕ್ರ**'ವು ಜ್ಞಾಪಿಸಿಕೊಡುತ್ತದೆ ಎಂಬುದನ್ನು ತಿಳಿಸಲು ಈ ಪುಸ್ತಕದಲ್ಲಿ ಯತ್ನಿಸಿದ್ದೇನೆ.

೩

ಈ ಪುಸ್ತಕದಲ್ಲಿರುವ ವಿಷಯವನ್ನು ಕುರಿತು ನಾಲ್ಕಾರು ಕಡೆ ಮಾತನಾಡಿದಾಗ 'ಇದರಲ್ಲಿ ಬುದ್ಧನ ಪರಿಮಳವೇ ತುಂಬಿಹೋಗಿದೆ' ಎಂಬ ಮಾತು ಬಂತು. ಬುದ್ಧನ ಸಂಬಂಧವಾದ ಚಿಹ್ನೆಯೊಂದನ್ನು ಸ್ವೀಕರಿಸಿಕೊಂಡಿರುವಾಗ ಆತನ ಪರಿಮಳ ಹರಡುವುದು ಸಹಜ ತಾನೆ. ಈ ಬುದ್ಧನಾದರೂ ನಮಗೆ ನಮ್ಮವನೇ. ಈ ದೇಶದಲ್ಲಿ ಒಪ್ಪಿರುವ ದಶಾವತಾರಗಳಲ್ಲಿ ಆತನನ್ನು ಒಂಬತ್ತನೆಯ ಅವತಾರವೆನ್ನುತ್ತಾರೆ. ಭಾರತೀಯ ದರ್ಶನಶಾಸ್ತ್ರದ ಬೆಳೆವಣಿಗೆಯನ್ನು ಬಲ್ಲ ವಿದ್ವಾಂಸರು 'ಉಪನಿಷತ್ತುಗಳಲ್ಲಿ ಯಾವ ಜೀವನದರ್ಶನವನ್ನು ಋಷಿಗಳು ಕಂಡು ಹೇಳಿದರೋ ಅದನ್ನು ಜನ ಮರೆತ ಕಾಲಕ್ಕೆ ಬುದ್ಧನು ಬಂದು ಪುನಃ ಅದನ್ನೆ ಜ್ಞಾಪಿಸಿ ಉದ್ಧಾರಮಾಡಿದನು' ಎನ್ನುತ್ತಾರೆ. ಬುದ್ಧನೇ ಒಂದು ಕಡೆ ಹೇಳಿರುವ 'ನಗರಸೂತ್ರ' ಎಂಬ ಉಪಮಾನಕಥೆಯಲ್ಲಿ ಈ ಮಾತಿಗೆ ಪುಷ್ಟಿ ಸಿಕ್ಕುತ್ತದೆ:

> "ಒಬ್ಬ ಮನುಷ್ಯನು ಒಂದು ದೊಡ್ಡ ಗೊಂಡಾರಣ್ಯದಲ್ಲಿ ನಡೆದು ಹೋಗುತ್ತಾ ಒಂದು ಬಹಳ ಹಳೆಯದಾದ ಹಾದಿಯನ್ನು ಕಾಣುತ್ತಾನೆ, ಹಿಂದಿನ ಕಾಲದಲ್ಲಿ ಜನರು ನಡೆದು ಗುರುತಾದ ಹಾದಿಯನ್ನು ಕಾಣುತ್ತಾನೆ. ಹಾಗೇ ಮುಂದೆ ಮುಂದೆ ಹೋದಾಗ ಒಂದು ಪುರಾತನವಾದ ನಗರವನ್ನು ಕಾಣುತ್ತಾನೆ. ಅದು ಹಳೆಯ ಕಾಲದ ರಾಜಧಾನಿ, ಅಲ್ಲಿ ಹಿಂದೆ ಜನ ಬದುಕಿ ಬಾಳಿದ್ದರು. ಅಲ್ಲಿ ತುಂಬ ತೋಟಗಳು, ವನಸ್ಥಲಗಳು, ಪುಷ್ಕರಿಣಿಗಳು. ಅದು ತುಂಬ ರಮಣೀಯವಾದ ಪ್ರದೇಶ.
>
> "ಆ ಮನುಷ್ಯನು ತನ್ನ ರಾಜನ ಬಳಿಗೋ ರಾಜಾಮಾತ್ಯನ ಬಳಿಗೋ ಬಂದು 'ದೇವ, ನಾನು ಇಂತಹ ಕಾಡಿನಲ್ಲಿ ನಡೆದುಹೋಗುತ್ತಿರುವಾಗ ಇಂತಹ ಕಡೆ ಇಂತಹ ದಾರಿಯನ್ನು ಕಂಡೆ. ಹಿಂದಿನ ಜನರು ನಡೆದು ಹೋಗಿದ್ದ ಆ ದಾರಿಯಲ್ಲಿ ನಾನೂ ನಡೆದುಹೋಗಿ, ಅಲ್ಲಿದ್ದ ಆ ಪುರಾತನವಾದ ರಾಜಧಾನಿಯನ್ನು ಕಂಡೆ. ಅಲ್ಲಿ ಹಿಂದಿನ ಕಾಲದಲ್ಲಿ ಜನ ಬದುಕಿ ಬಾಳಿದ್ದರು. ಅಲ್ಲಿ ತುಂಬ ತೋಟಗಳು, ವನಸ್ಥಲಗಳು, ಪುಷ್ಕರಿಣಿಗಳು. ಅದು ತುಂಬ ರಮಣೀಯವಾದ ಪ್ರದೇಶ. ದೇವ, ಆ ನಗರವನ್ನು ಉದ್ಧಾರಮಾಡಬೇಕು' ಎನ್ನುತ್ತಾನೆ.
>
> "ಆಗ ಆ ರಾಜನೋ ಅವನ ಅಮಾತ್ಯನೋ ಆ ನಗರವನ್ನು ಉದ್ಧಾರಮಾಡುತ್ತಾರೆ. ಅಲ್ಲಿಂದ ಆಚೆಗೆ ಆ ನಗರ ಸಂಪತ್ಸಮೃದ್ಧ

ವಾಗಿ, ವೃದ್ಧಿಗೊಂಡು, ಜನಗಳಿಂದ ತುಂಬಿ, ವೈಭವಯುಕ್ತವಾಗಿ ಮೆರೆಯುತ್ತದೆ.

"ಅದರ ಹಾಗೆಯೇ ನಾನು ಕೂಡ ಪುರಾಣಕಾಲದ ಸಮ್ಯಕ್ ಜ್ಞಾನಿಗಳು ನಡೆದುಹೋಗಿರುವಂತಹ ಪುರಾತನವಾದ ಮಾರ್ಗವನ್ನು ಕಂಡಿದ್ದೇನೆ."

ಈ ಕಾರಣದಿಂದ, ಬುದ್ಧನ ಬೋಧೆಯೆಂದರೆ ಭಗವದ್ಗೀತೆಯ ಕರ್ಮ ಜ್ಞಾನಗಳೇ ಬೇರೆ ರೂಪದಲ್ಲಿ ಬಂದಿದೆ ಎನ್ನಬಹುದು. ವ್ಯತ್ಯಾಸವೇನೆಂದರೆ, ಗೀತೆಯಲ್ಲಿ ವರ್ಣಿಸಿರುವ ಭಕ್ತಿ ಇಲ್ಲಿ ಉಕ್ತವಾಗಿಲ್ಲ. ಆದರೂ ಬುದ್ಧನು ಕೂಡ ಕೃಷ್ಣನ ಸಂತಾನಕ್ಕೇ ಸೇರಿದವನು ಎಂಬುದನ್ನು ಇದೇ ಪುಸ್ತಕದ 'ಧರ್ಮಚಕ್ರ'ವೆಂಬ ವಿಭಾಗದಲ್ಲಿ ನೋಡಬಹುದು.

೪

ಶ್ರೀಮಾನ್ ಡಿ. ವಿ. ಜಿ. ಅವರು ಕಳೆದ ವರ್ಷ ಆಗಸ್ಟ್ ೧೫ರ ನೆನಪಿಗೆ "ಸ್ವತಂತ್ರಭಾರತದ ಅಭಿನಂದನಸ್ತವ" ಎಂಬ ಇಪ್ಪತ್ತನಾಲ್ಕು ವೃತ್ತಗಳ ಮಾಲಿಕೆಯೊಂದನ್ನು ಪ್ರಕಟಿಸಿದರು. ಅದರಲ್ಲಿ ಅವರು

"ಪಾರಕ್ಯಾಕ್ರಾಂತಿ ಈಗಳ್ ಪರಿದುದು... ಜನತಾರಾಜ್ಯಂ ಅಭೂತ ಪೂರ್ವಸುಕೃತಂ ತಾನ್ ಇಂದು ಸಂದಿರ್ಪ್ಪುದು; ಜನನೀ, ನೀನ್ ಅದು **ನಿಲ್ವವೊಲ್** ಕರುಣಿಸೌ ಚೈತನ್ಯನೈರ್ಮಲ್ಯಮಂ.. "

ಎಂದರು. ನಿಜ, ಸ್ವಾತಂತ್ರ್ಯ ಬಂತು. ಆದರೆ ಅದು ಉಳಿಯಬೇಕು. ಅದು ಉಳಿಯಬೇಕಾದರೆ ಜನರ ಮೈಮಾತುಮನಸ್ಸುಗಳು ತಮ್ಮ ಕ್ರಿಯಾ ನೈರ್ಮಲ್ಯವನ್ನು ಕಾಪಾಡಿಕೊಳ್ಳಬೇಕು. ಸ್ವಾತಂತ್ರ್ಯವೆಂಬುದಕ್ಕೂ ಮಿತಿಯಿರಬೇಕು, ಯುಕ್ತಾಯುಕ್ತ ಪರಿಜ್ಞಾನವಿರಬೇಕು.

"ನಿಯಮ ಸ್ವಾತಂತ್ರ್ಯಗಳ್ ತಾಂ ಸಮಹಿತಗತಿಯಿಂದೆ ಅಂತು ಸೇರ್ದ್ದಂದು ಧರ್ಮಂ. ಭಯಮೇನ್? ಆ ಸೂಕ್ಷ್ಮಮಂ ನಾಂ ಅರಿತಿರೆ, ಜನನೀ ತತ್ತ್ವಮಂ ರೂಪಿಸು ಎನ್ನೊಳ್."

ಏನು ಮಾಡಬೇಕು ಎಂಬುದು ಎಲ್ಲಾ ನಮಗೆ ವಿಶದವಾಗಿ ಗೊತ್ತು. ಯಾವ ಅತಿಗೂ ಹೋಗದೆ, ಸಂಯಮವನ್ನೂ ಸ್ವಾತಂತ್ರ್ಯವನ್ನೂ ಹೊಂದಿಸಿಕೊಂಡು ಹೋಗಬೇಕು. ಆದರೆ ಮಾತ್ರ ಅದನ್ನು ಆಚರಣೆಯಲ್ಲಿ ತರುತ್ತಿಲ್ಲ, ಅಷ್ಟೆ. 'ಎದ್ದರೆ ಆಳಲ್ಲ' ಎಂಬ ಗಾದೆಯ ಹಾಗೆ.

> "ಧನ್ಯಂ ಗಾಂಧಿ ಮಹಾತ್ಮನ್. ಆತನವರ್ ಅವರ್ ಧನ್ಯರ್. ಮಹಾಸತ್ತ್ವರಾ ಪುಣ್ಯೌಘದ್ರುವೊಳ್ ಇಂದು ಭಾರತಿ ಫಲಾರಂಭಂ ಸ್ವರಾಜ್ಯೇಶ್ವರೀ"

ದೇಶವನ್ನು ಸ್ವತಂತ್ರವಾಗಿ ಮಾಡಬೇಕೆಂದು ಗಾಂಧಿಯವರು ಹಿಡಿದ ಕೆಲಸ ಕೈಗೂಡಿತು. ಆ ಹಿರಿಯರು ಮಾಡಿದ ಪುಣ್ಯದಿಂದ ನಮ್ಮ ನಾಡಿಗೆ ಸ್ವರಾಜ್ಯ ಬಂತು. ಅವರ ಪುಣ್ಯದ ರಾಶಿಯೆಂಬ ಮರದಲ್ಲಿ ಈಗ ಫಲ ಬಿಡತೊಡಗಿದೆ. ಈ ಸ್ವರಾಜ್ಯದ ಮುಂದಿನ ಹೆಜ್ಜೆ ಏನು?

> "ಇನ್ನು ಈ ನಿನ್ನ ಕುಟುಂಬದ ಪ್ರಜೆಯೊಳ್ ಅನ್ಯೋನ್ಯ ಅಂಗಿತಾ ಭಾವದಿಂ ಭಿನ್ನಂ ಪಾರುಗೆ. ಮಾತೃಪಾದ ಭಜನೈಕ ಆವಿಷ್ಟರ್ ಅಕ್ಕೆ ಎಲ್ಲರುಂ"

ದೇಶದ ಜನರೆಲ್ಲರೂ ಅನ್ಯೋನ್ಯವಾಗಿ ಬಾಳುವುದನ್ನು ಕಲಿಯಬೇಕು, ತಾವೆಲ್ಲರೂ ಒಂದೇ ತಾಯಿಯ ಮಕ್ಕಳೆಂಬುದನ್ನು ತಿಳಿಯಬೇಕು. ಹಾಗೆಂದು ಬಾಯಿಂದ ಹೇಳಿದರೆ ಸಾಲದು. ಅದನ್ನು ಕಾರ್ಯದಲ್ಲಿ ನಡೆದು ತೋರಬೇಕು.

> ವಂದೇಮಾತರಮೆಂದು ಪಾಡುಗೆ ಜನಂ ಬಾಯಿಂದಮೇಂ ಬಾಯೊಡಂ
> ಸಂದಿರ್ಕ್ಕಾವಗಮೆಲ್ಲ ಜೀವಕರಣಂ ಪಾಡಕ್ಕೆ ಕಾರ್ಯಸ್ಫುಟಂ
> ಮಾಂದ್ಯಂ ಪೋಗುಗೆ ಬುದ್ಧಿಯಂತ್ರಗಳಿನ್ ಆಂಧ್ಯಂ ನೀತಿನೇತ್ರಂಗಳಿಂ
> ವಂದೇಮಾತರಮುಸ್ತು ಭಾರತಿ ಶಿವಂ ಸರ್ವೋತ್ಸವಂ ಮಂಗಳಂ

ಆಡಿದುದು ಕಾರ್ಯದಲ್ಲಿ ಸ್ಫುಟವಾದರೆ, ಬುದ್ಧಿಯೆಂಬ ಯಂತ್ರ ಚುರುಕಾಗಿ ಕೆಲಸಮಾಡಿದರೆ, ನಯ ಯಾವುದೆಂದು ತಿಳಿಯುವ ಕಣ್ಣಿಗೆ ಕುರುಡು ತೊಲಗಿದರೆ ಆಗ ನಾಡಿಗೆ ಶಿವ, ಸರ್ವೋತ್ಸವ, ಮಂಗಳ ಎಂಬುದನ್ನು ಸದಾ ಕಣ್ಣುಮುಂದೆ ಎತ್ತಿ ಕಟ್ಟುವುದಕ್ಕಾಗಿ ಈ 'ಅಶೋಕ ಚಕ್ರ' ನಮ್ಮ ಬಾವುಟದ ನಡುವೆ ಇದೆ.

೨೨-೭-೪೮
ಬೆಂಗಳೂರು

ಜಿ. ಪಿ. ರಾಜರತ್ನಂ

# ಕೃತಜ್ಞತೆಗಳು

ಈ ಪುಸ್ತಕವನ್ನು ಬರೆಯುವುದಕ್ಕಾಗಿ—

ಭಾರತದ ಪುರಾವಸ್ತು ಸಂಶೋಧನಾಶಾಖೆಯ ಒಂದೆರಡು ವರದಿಗಳು, ಸಾರನಾಥ ವಸ್ತುಸಂಗ್ರಹಾಲಯದ ಕೈಪಿಡಿ; ಕೆಲವು ಬುದ್ಧವಚನಗಳು, ಅಶೋಕನ ಶಾಸನಗಳು; ಗಾಂಧಿಯವರ ಕೆಲವು ಬರಹಗಳು, ವೃತ್ತಪತ್ರಿಕೆಯ ಕೆಲವು ವರದಿಗಳು

—ಇವುಗಳಿಗೆ ಋಣಿಯಾಗಿದ್ದೇನೆ.

ಈ ಪುಸ್ತಕದಲ್ಲಿರುವ ಚಿತ್ರಗಳನ್ನು ಅಲ್ಲಿಂದ ಇಲ್ಲಿಂದ ಪ್ರತಿಮಾಡಿಕೊಂಡು ಬರೆದುಕೊಟ್ಟ ಗೆಳೆಯರು ಶ್ರೀ. ಎಂ. ಎಸ್. ಪುರುಷೋತ್ತಮರಾಯರಿಂದಲೂ ನನಗೆ ಉಪಕಾರವಾಗಿದೆ.

ತಮ್ಮ ಧ್ವಜದ ಮೇಲಿನ ವೃತ್ತವನ್ನು ಎತ್ತಿಕೊಳ್ಳಲು ಅನುಮತಿಕೊಟ್ಟ 'ಶ್ರೀ ಗುಹ' ಅವರಿಗೂ ನಾನು ಕೃತಜ್ಞ.

# ಧರ್ಮಶ್ರೀಧ್ವಜಂ

( ಶ್ರೀ ಗುಹ )

ಶ್ರೀಮದ್ಭಾರತಮೆಂಬ ಪಾಲ್ಗಡಲೊಳಾ ಸತ್ಯಾಖ್ಯಭೂಮೀಧ್ರಮಂ
ತಾಮತ್ಯದ್ಭುತ ಶಾಂತಿಸಾಧನ ಮಹಾಶ್ರೀದಾಮ ಸಂಬಂಧದಿಂ
ಪ್ರೇಮಪ್ರಾಭವಶಕ್ತಿಯುಕ್ತರಮಲರ್ ಸಂಮಂಥಿಸಲ್ ಮೂಡಿದೈ
ಧರ್ಮಶ್ರೀಧ್ವಜಚಂದ್ರಮಾ ನಿನಗಿದೋ ಸುಸ್ವಾಗತಂ ಸ್ವಾಗತಂ

ಶ್ರೀಮಂತವಾದ ಭಾರತವೆಂಬ ಹಾಲಿನ ಕಡಲಿನಲ್ಲಿ
ಸತ್ಯವೆಂಬ ಹೆಸರಿನ ಪರ್ವತವನ್ನು—
ಪ್ರೇಮದಿಂದ ಹುಟ್ಟಿದ ಶಕ್ತಿಯಿಂದ ಕೂಡಿ
ಅಮಲರಾದವರು ತಾವು—
ಶಾಂತಿಸಾಧನವೆಂಬ ಮಹಾಮಹಿಮೆಯುಳ್ಳ
ಹಗ್ಗವನ್ನು ಬಿಗಿದುಕಟ್ಟಿ—
ಚೆನ್ನಾಗಿ ಮಥಿಸಲು ನೀನು ಮೇಲೆದ್ದು ಬಂದೆ.

ಚಂದ್ರನಿಗೆ ಸಮನಾದ ಧರ್ಮಶ್ರೀಧ್ವಜವೆ,
ಇದೋ ನಿನಗೆ ಸುಸ್ವಾಗತ, ಸ್ವಾಗತ.

# ವಿವರ

# ಅಶೋಕ ಭಾರತ

## (ಹಿಂದಿನ ನೆನಪು)



ಹಿಂದುಗಡೆಯ ಪುಟದಲ್ಲಿರುವುದು ಅಶೋಕನು ಸ್ಥಾಪಿಸಿದ ಅನೇಕ ಶಿಲಾ ಸ್ತಂಭಗಳಲ್ಲಿ ಒಂದಾದ, **ಲೌರಿಯ ನಂದನಘರ್** ಎಂಬ ಸ್ಥಳದಲ್ಲಿರುವ, ಶಿಲಾಸ್ತಂಭ. ಅದರ ತುದಿಯಲ್ಲಿ ಇರುವ ವಿಗ್ರಹ—ಹೊಂಚಿ ಕುಳಿತ ಸಿಂಹ.

೧೬ನೆಯ ಪುಟದಲ್ಲಿ ಕಾಣುವ ಭಾರತಭೂಚಿತ್ರದಲ್ಲಿ ಬೆಳ್ಳಗೆ ಬಿಟ್ಟಿರುವ ಆ ಅಷ್ಟೂ **ಅಶೋಕನು ಆಳುತ್ತಿದ್ದ ಸಾಮ್ರಾಜ್ಯ.** ಈ ಚಿತ್ರದಲ್ಲಿ ಸಂಖ್ಯೆಗಳಿಂದ ಸೂಚಿಸಿರುವ ಪ್ರದೇಶಗಳ ಹೆಸರು ಈ ಪ್ರಕಾರವಾಗಿದೆ:

| | | | |
|---|---|---|---|
| 1 | ಕಾಶ್ಮೀರ | 15 | ವನವಾಸಿ |
| 2 | ಗಾಂಧಾರ | 16 | ರಾಷ್ಟ್ರಿಕ |
| 3 | ನೇಪಾಳ | 17 | ಪಿಟೆನಿಕ |
| 4 | ಕಾಶಿ | 18 | ಪುಳಿಂದ |
| 5 | ಮಗಧ | 19 | ಭೋಜ |
| 6 | ಅಂಗ | 20 | ಆಂಧ್ರ |
| 7 | ವಂಗ | 21 | ಸುರಾಷ್ಟ್ರ |
| 8 | ಕಳಿಂಗ | 22 | ಮಾಲವ |
| 9 | ಚೋಳ | 23 | ಯವನ |
| 10 | ಪಾಂಡ್ಯ | 24 | ಕಾಂಭೋಜ |
| 11 | ಸಿಂಹಳ | 25 | ಗೆಡ್ರೋಸಿಯ |
| 12 | ಕೇರಳಪುತ್ರ | 26 | ಅರಖೋಸಿಯ |
| 13 | ಸತಿಯಪುತ್ರ | 27 | ಏರಿಯ |
| 14 | ಮಹಿಷಮಂಡಲ | 28 | ಪರಪೊನಿಸಧೈ |

# ಅಶೋಕ ಭಾರತ

ದೇವಾನಾಂಪ್ರಿಯ, ಪ್ರಿಯದರ್ಶಿ ಎಂದು ಹೆಸರಾದ ಅಶೋಕರಾಜನ ಕಾಲದಲ್ಲಿ ಭಾರತವು ಸಾಧಿಸಿ ಕಂಡಂತಹ ರಾಜಕೀಯ ಐಕ್ಯತೆಯನ್ನಾಗಲಿ, ನಿಜವಾಗಿಯೂ '**ಅ-ಶೋಕ**'ವೆನ್ನಿಸಿದ ಜನಜೀವನವನ್ನಾಗಲಿ ಸಾಧಿಸಿದವರು ಅವನಿಗೆ ಮೊದಲು ಇರಲಿಲ್ಲ, ಅವನು ಆದ ಅನಂತರ ಬರಲಿಲ್ಲ—ಎಂದು ಈ ದೇಶದ ಚರಿತ್ರೆಯನ್ನು ತಿಳಿದವರೆಲ್ಲ ಹೇಳುತ್ತಾರೆ.

ಪೂರ್ವದಲ್ಲಿ ಬಂಗಾಳದಿಂದ ಹಿಡಿದು ಪಶ್ಚಿಮದಲ್ಲಿ ಈಗಿನ ಅಫ್ಘನಿಸ್ಥಾನ ಬಲೂಚಿಸ್ಥಾನಗಳು ಪೂರ, ಉತ್ತರದಲ್ಲಿ ಕಾಶ್ಮೀರದಿಂದ ತೊಡಗಿ ದಕ್ಷಿಣದಲ್ಲಿ ಈಗಿನ ಮೈಸೂರಿನ ಮೇರೆಯ ವರೆಗೂ—ಮತ್ತೆ ಯಾವ ರಾಜನ ಕಾಲದಲ್ಲಿ, ಈ ದೇಶ ಇಷ್ಟು ಏಕವಿಸ್ತಾರವಾಗಿದ್ದದ್ದು?

ಇದರಂತೆಯೇ ಮತ್ತೆ, ಯುದ್ಧದಲ್ಲಿ ಅದ್ವಿತೀಯವಾದ ಜಯ ಲಭಿಸಿರುವಾಗ, ಯುದ್ಧದ ಘೋರಕ್ಕೆ ಮನಸ್ಸು ಕರಗಿ, ಅಂದಿನಿಂದ ಯುದ್ಧಕ್ಕೆ ವಿಮುಖನಾಗಿ, ಕೇವಲ ಮೈತ್ರಿಯೊಂದರ ಬಲದಿಂದಲೇ ತನ್ನ ಸಾಮ್ರಾಜ್ಯವನ್ನು ಪಾಲಿಸಿದ ಪ್ರಭು ಇಂಥವನು ಇನ್ನೊಬ್ಬ ಯಾರು?

ರಾಜ್ಯದಾಹದ ಲವಲೇಶವಿಲ್ಲದೆ, 'ಪ್ರಜೆಗಳೆಲ್ಲರೂ ನನ್ನ ಮಕ್ಕಳು' ಎಂದು ತ್ರಿಕರಣಪೂರ್ವಕವಾಗಿ ನಂಬಿ, ನುಡಿದು, ನಡೆದು, ತನ್ನ ಪುರುಷಾರ್ಥವನ್ನು ಸಾಧಿಸಿಕೊಂಡು ಕೃತಕೃತ್ಯನಾದ ಇವನ ಸಮ ಇತಿಹಾಸದಲ್ಲಿ ಇನ್ನು ಯಾರು?

ನಿಜ, 'ಇನ್ನು ಯಾರು?' ಎಂದು ಕೇಳಬೇಕಾದ್ದೇ. ನಿಜವೆ, ಈ ನಾಡಿನಲ್ಲಿಯೇ ಹುಟ್ಟಿ ಬೆಳೆದ ಅನೇಕ ಪ್ರಭುಶಕ್ತಿಗಳೂ ಬೇರೆ ನಾಡುಗಳಿಂದ ಬೇರೆಬೇರೆ ವಿಧವಾಗಿ ಬಂದ ಇತರ ಶಕ್ತಿಗಳೂ ಈ ಭಾರತವನ್ನು ಒಂದುಮಾಡಿ ತಾವೇ ಏಕತಂತ್ರರಾಗಿ ಆಳಬೇಕೆಂದು ಉದ್ಯೋಗಿಸಿ, ಅದನ್ನು ಹಲವು ಸಲ ಬಹುಮಟ್ಟಿಗೆ ಸ್ವಲ್ಪ ಕಾಲವಾದರೂ ಸಾಧಿಸಿರುವರೆಂಬುದು ನಿಜವೇ ಆದರೂ, ಅವರು ಯಾರಿಗೂ ಅಶೋಕನ 'ಅ-ಶೋಕ'ಪ್ರವೃತ್ತಿ ಇದ್ದಂತೆ ಕಂಡುಬರುವುದಿಲ್ಲವೆಂಬುದೂ ಅಷ್ಟೇ ನಿಜವಾದದ್ದು.

ಭಾರತವು ಬಹು ಹಿಂದಿನ ಕಾಲದಿಂದಲೂ ಅನೇಕರು ಬಂದು, ಇದ್ದು, ಹೋಗುವುದಕ್ಕೆ ಫಲವತ್ತಾದ ಹೊಲವಾಗಿದೆ. ಮೊದಲು ಆರ್ಯರು ಬಂದರಂತೆ;




ಅಶೋಕ ಭಾರತ

ಅನಂತರ ಗ್ರೀಕರು ಪರ್ಷಿಯನ್ನರು ಬಂದರು; ಆ ಬಳಿಕ ಹೂಣರು ಬರಲು ಯತ್ನಿಸಿದರು; ಆಮೇಲೆ ಮಹಮದೀಯರು ದಾಳಿಯಿಟ್ಟರು; ಕೊನೆಕೊನೆಗೆ ಪೋರ್ಚು

ಗೀಸರು, ಡಚ್ಚರು, ಫ್ರೆಂಚರು, ಇಂಗ್ಲಿಷರು ತಂಡತಂಡವಾಗಿ ಬಂದರು. ಇವರಲ್ಲಿ ಆರ‍್ಯರು ಮಾತ್ರ ಈ ದೇಶದ ಮೇಲೆ ಮಾರಿಯು ಕಣ್ಣಿಡದೆ ಬಂದು, ಈ ದೇಶಕ್ಕೆ ಜೀವಾಳವೆನ್ನಿಸಿರುವ ಸಂಸ್ಕೃತಿಯನ್ನೂ ಅಧ್ಯಾತ್ಮವಿದ್ಯೆಯನ್ನೂ ಕೊಟ್ಟು ಉದ್ಧಾರ ಮಾಡಿದರು. ಉಳಿದವರು ಮಾತ್ರ ಇಲ್ಲಿಯದನ್ನು ತೊಂಡುಮೇದು ಹೋಗುವು ದಕ್ಕಾಗಿಯೇ ಬಂದು, ತಮ್ಮ ಕಾಲ ಮುಗಿದ ಮೇಲೆ ಹಿಂದಿರುಗಿದವರು.

ಹೀಗೆ ಬಂದು ಇದ್ದು ಹೋದವರಲ್ಲಿ ಇತ್ತೀಚಿನವರಾದ ಇಂಗ್ಲಿಷರ ಮುಖ ವನ್ನು ನಾವು ಮೊದಲ ಬಾರಿಗೆ ಕಂಡದ್ದು, ೧೬೧೫ರಲ್ಲಿ. ಆಗ ಇಂಗ್ಲೆಂಡ್ ದೇಶದ ರಾಯಭಾರಿಯೊಬ್ಬನು ಭಾರತದ ಮೊಗಲ ಚಕ್ರವರ್ತಿಯ ಆಸ್ಥಾನಕ್ಕೆ ಬಂದು, ತನ್ನ ದೇಶದವರು ಈ ದೇಶದಲ್ಲಿ ವ್ಯಾಪಾರಮಾಡಲು ಅಪ್ಪಣೆಕೊಡಬೇಕೆಂದು ಬೇಡಿ ದನು. ಆಗ ದೊರೆತ ಅಪ್ಪಣೆಯನ್ನು ಉಪಯೋಗಿಸಿಕೊಂಡು, ಈ ದೇಶಕ್ಕೆ ವ್ಯಾಪಾರ ಕ್ಕಾಗಿ ಬಂದ ಈಸ್ಟ್ ಇಂಡಿಯಾ ಕಂಪೆನಿ ಕ್ರಮಕ್ರಮವಾಗಿ ಈ ದೇಶದ ಇತರ ವ್ಯವಹಾರಗಳಲ್ಲಿಯೂ ಕೈಹಾಕಿ, ತನ್ನ ಸ್ವಾರ್ಥದ ಸೀಮೆಯನ್ನು ವಿಸ್ತರಿಸಿಕೊಂಡಿತು. ಈ ಕಥೆ ೧೭೫೭ರಲ್ಲಿ ಒಂದು ಘಟ್ಟಕ್ಕೆ ಬಂತು. ಅದೇ ವರುಷದಲ್ಲಿಯೇ ಪ್ಲಾಸಿಯ ಕದನ ನಡೆದು, ಈಸ್ಟ್ ಇಂಡಿಯಾ ಕಂಪೆನಿ ಇಂಡಿಯಾದ ಆಡಳಿತವನ್ನು ತಾನು ವಹಿಸಿ ಕೊಂಡಿತು. ಈ ದೇಶದ ಜನರ ಅನೈಕ್ಯತೆಯೇ ಕಾರಣವಾಗಿ ಆ ಕಂಪೆನಿ ಭಾರತ ವನ್ನು ಒಂದು ನೂರು ವರುಷಕಾಲ ತನಗೆ ಬೇಕಾದ ಹಾಗೆ ಆಳಿಕೊಂಡುಹೋಯಿತು.

ಈ ಕಂಪೆನಿಯ ಆಳಿಕೆಯನ್ನು ಕೊನೆಗಾಣಿಸಬೇಕೆಂದು ೧೮೫೭ರಲ್ಲಿ ಮೊದಲ ನೆಯ ಬಾರಿಗೆ ಒಂದು ಚಳುವಳಿ ದೇಶವನ್ನೆಲ್ಲ ಉಲ್ಲೋಲಕಲ್ಲೋಲ ಮಾಡಿತು. ಇದರ ಪರಿಣಾಮವಾಗಿ ಭಾರತದ ಆಳಿಕೆ ಕಂಪೆನಿಯ ಕೈಯಿಂದ ತಪ್ಪಿ, ಇಂಗ್ಲೆಂಡಿನ ರಾಣಿಯ ಕೈಗೆ ಹೋಯಿತು. ಭಾರತ ಬ್ರಿಟಿಷ್ ಚಕ್ರಾಧಿಪತ್ಯದ ಮುಕುಟಮಣಿ ಎನ್ನಿಸಿಕೊಂಡಿತು! ಇಂಗ್ಲಿಷರ ಮತ, ಇಂಗ್ಲಿಷರ ಭಾಷೆ, ಅವರ ವಿದ್ಯಾಭ್ಯಾಸ ಪದ್ಧತಿ, ಅವರಿಟ್ಟ ಆಡಳಿತ ಕ್ರಮ, ಅವರು ತಿಳಿಸಿದ ವಿದ್ಯೆ ಇವುಗಳ ಪ್ರಭಾವ ಇಲ್ಲಿ ಹೆಚ್ಚಾಯಿತು.

ಈ ಹೊಸ ಸಂಪರ್ಕದಿಂದ ನಮಗೆ ಲಾಭವಾಯಿತು; ನಷ್ಟವೂ ಆಯಿತು. ಪರರಿಗೆ ಅಡಿಯಾಳಾಗಿ, ನಮ್ಮ ಹಣಕಾಸುಗಳನ್ನು ಕಳೆದುಕೊಂಡು, ಅವರು ಹೇಳಿ

ಕೊಟ್ಟಷ್ಟನ್ನು ಕಲಿತು, ಅವರ ಆಜ್ಞೆಗಳನ್ನು ಶಿರಸಾವಹಿಸಿ ನಮಗೆ ನಮ್ಮಲ್ಲಿಯೇ ನಂಬಿಕೆಯಿಲ್ಲದ ಹಾಗಾಗಿತ್ತು. ಆದರೆ ಅವರಲ್ಲಿಯೇ ಉದಾತ್ತರಾದವರು ಕೆಲವರು ಮಾಡಿದ ಜ್ಞಾನದಾನದಿಂದ ನಮಗೆ ಸ್ವಸ್ವರೂಪ ಜ್ಞಾನವುಂಟಾಯಿತು, ನಮ್ಮ ನಷ್ಟ ಏನೆಂದು ನಮಗೆ ತಿಳಿದುಬಂತು, ಆ ನಷ್ಟವನ್ನು ತಡೆಗಟ್ಟಿ ನಮ್ಮನ್ನು ನಾವೇ ನಡೆಸಿಕೊಳ್ಳುವ ಸ್ಥಿತಿಗೆ ಬರಬೇಕೆಂಬ ಸ್ವಾತಂತ್ರ್ಯದ ದಾಹ ಹುಟ್ಟಿತು.

ಈ ದಾಹವನ್ನು ಪೂರೈಸಬೇಕೆಂಬ ಸದಾಶಯವೇ ೧೮೮೫ರಲ್ಲಿ ಕಾಂಗ್ರೆಸ್ಸಿನ ಜನನಕ್ಕೆ ಮೂಲಕಾರಣವಾಯಿತು. ಪಾರತಂತ್ರ್ಯದಿಂದ ಪಾರಾಗಿ ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂದು ಹುಟ್ಟಿದ ಕಾಂಗ್ರೆಸ್ಸು ಆ ಮೊದಲ ವರುಷಗಳಲ್ಲಿ ಎಂತಹ ಚಳುವಳಿ ನಡೆಸಿತು; ೧೯೧೯ರಲ್ಲಿ ಗಾಂಧೀಜಿ ರಾಜಕೀಯದಲ್ಲಿ ಪ್ರವೇಶಮಾಡಿದಂದಿನಿಂದ ೧೯೪೨ರ ವರೆಗೆ ಕಾಂಗ್ರೆಸ್ ಸತ್ಯ ಅಹಿಂಸೆಗಳ ಧಾರಣಾಶಕ್ತಿಯಿಂದ ಎಂತಹ ಅದ್ಭುತ ಸತ್ಯಾಗ್ರಹ ಸಮರವನ್ನು ನಡೆಸಿತು; ೧೯೪೨ರ ಆ 'ಕ್ವಿಟ್ ಇಂಡಿಯಾ' ಘೋಷಣೆ ಹೇಗೆ ನಾಡಿಗೆ ನಾಡನ್ನೇ ಪುನರುಜ್ಜೀವನಗೊಳಿಸಿತು; ಕಟ್ಟಕಡೆಗೆ ೧೯೪೭ರ ಆಗಸ್ಟ್ ೧೫ನೆಯ ದಿನ ಹೇಗೆ ಭಾರತ ಬಂಧಮುಕ್ತವಾಯಿತು—ಇದೆಲ್ಲವೂ ಎಲ್ಲರಿಗೂ ತಿಳಿದಿರುವುದೇ.

ಈ ಸ್ವತಂತ್ರಭಾರತ ತಾನು ನೆನೆಯುತ್ತಿರುವ ಆದರ್ಶವಾದರೂ ಅಶೋಕನ ಆದರ್ಶವೇ. ರಾಜ್ಯವನ್ನು ವಿಸ್ತರಿಸಬೇಕು ಎಂಬುದು ಇದರ ಗುರಿಯಲ್ಲ, ಲೋಕದ ಸುಖವನ್ನು ಸಾಧಿಸಬೇಕು ಎಂಬುದೇ ಇದರ ಮುಖ್ಯ ಆಕಾಂಕ್ಷೆ. ಬಲಪ್ರಯೋಗದಿಂದ ಸ್ವಜನರನ್ನೂ ಪರಜನರನ್ನೂ ಆಳಬೇಕೆಂಬ ಆಸೆ ಇದಕ್ಕಿಲ್ಲ; ವಿಶುದ್ಧವಾದ ಮೈತ್ರಿಯಿಂದ ಸ್ವಜನರನ್ನೂ ಪರಜನರನ್ನೂ ಒಲಿಸಿಕೊಳ್ಳಬೇಕೆಂಬುದೇ ಇದರ ಹಿರಿಯ ಆಸೆ.

ಈ ಆಸೆಯನ್ನು ಸಾಧಿಸುವುದರಲ್ಲೇ ತಾನು ಸದಾ ನಿರತವಾಗಿರಬೇಕು ಎಂಬುದನ್ನು ತನಗೆ ತಾನೇ ನೆನಪು ಕೊಟ್ಟುಕೊಳ್ಳುವುದಕ್ಕಾಗಿಯೇ ಸ್ವತಂತ್ರಭಾರತ ತನ್ನ ರಾಷ್ಟ್ರಧ್ವಜದಲ್ಲಿ 'ಅಶೋಕಚಕ್ರ'ವನ್ನು ಆರಾಧನೆಗೆ ಇರಿಸಿಕೊಂಡಿದೆ.

ಕಳೆದ ವರ್ಷದ ಜುಲೈ ೨೨ಕ್ಕೆ ಮೊದಲು ಇದ್ದ ಹಳೆಯ ರಾಷ್ಟ್ರಧ್ವಜಕ್ಕೂ ೨೨ರಿಂದ ಈಚೆಗೆ ಇರುವ ಹೊಸ ರಾಷ್ಟ್ರಧ್ವಜಕ್ಕೂ ಇರುವ ಬಾಂಧವ್ಯವನ್ನು ಹಿಂದಿನ ಪುಟದ ಚಿತ್ರ ಸೂಚಿಸುತ್ತದೆ.

# ನಮ್ಮ ರಾಷ್ಟ್ರಧ್ವಜ

ಪ್ರತಿಯೊಂದು ದೇಶದ ಮನಸ್ಸಿನಲ್ಲಿಯೂ ಇರುವ ಆಸೆ, ಆಕಾಂಕ್ಷೆ, ಆದರ್ಶಗಳನ್ನು, ಕಣ್ಣಿಗೆ ಕಾಣುವಂತೆ, ಧ್ವಜದ ರೂಪದಲ್ಲಿ ಮೇಲೆತ್ತಿ ಹಿಡಿಯುವುದು ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಿಂದಲೂ ಬಂದ ಪದ್ಧತಿ.

ಧ್ವಜವೇ ರಾಷ್ಟ್ರಸರ್ವಸ್ವದ ಸಂಕೇತವೆಂಬ ಸಹಜವಾದ ಕಾರಣದಿಂದಲೇ, ಸ್ವತಂತ್ರಭಾರತವನ್ನು ಸಾಧಿಸುವುದಕ್ಕೆ ಹೊರಟ ಆ ಅಂದಿನ ದೇಶಪ್ರೇಮಿಗಳು ಸ್ವತಂತ್ರಭಾರತದ ರಾಷ್ಟ್ರಧ್ವಜದ ರಚನೆಗೂ ಮನಸ್ಸು ತಂದರು.

ಹೀಗೆ ರಚನೆಯಾದ ಧ್ವಜಗಳಲ್ಲಿ ಮೊತ್ತಮೊದಲನೆಯದು ೧೯೦೭ರಲ್ಲಿ ಆಯಿತಂತೆ. ಭಾರತದಿಂದ ಹೋಗಿ ಫ್ರಾನ್ಸಿನಲ್ಲಿ ಆಶ್ರಿತರಾಗಿದ್ದ ಮ್ಯಾಡಂ ಕಾಮಾ ಎಂಬ ಮಹಿಳೆಯೂ ಇನ್ನಿತರ ಮಿತ್ರರೂ ಈ ಮೊದಲನೆಯ ಧ್ವಜವನ್ನು ಕಲ್ಪಿಸಿದರಂತೆ.




ಇದಾದರೂ ತ್ರಿವರ್ಣಧ್ವಜವೇ. ಮೇಲಿನಿಂದ ಕೆಳಗೆ ಬಂದರೆ, ಕ್ರಮವಾಗಿ ಕೇಸರಿ, ಬಿಳುಪು, ಹಸಿರು ವರ್ಣಗಳೇ. ಕೇಸರಿಯ ಮೇಲೆ ಸಾಲಾಗಿ ಎಂಟು ನಕ್ಷತ್ರ ; ಬಿಳುಪಿನ ಮೇಲೆ "ವಂದೇ ಮಾತರಂ" ಶಾಸನ; ಕೆಳಗಿನ ಹಸುರಿನ ಮೇಲೆ ಈ ಅಂಚಿಗೆ ಸೂರ್ಯ, ಆ ಅಂಚಿಗೆ ಚಂದ್ರ.

ಇದು ಭಾರತದಲ್ಲಿ ಪ್ರಚಾರಕ್ಕೆ ಬರಲಿಲ್ಲ.

ಇದರ ಮೂರು ವರ್ಣಗಳಿಗೂ ಅದರ ಮೇಲಿನ ವಿವಿಧ ಚಿಹ್ನಗಳಿಗೂ ಆ ರಚಿಸಿದವರು ಏನು ಅರ್ಥವಿಟ್ಟಿದ್ದರೋ ನಮಗೆ ತಿಳಿಯದು. ಬಹುಶಃ 'ಸೂರ್ಯ ಚಂದ್ರ

ನಕ್ಷತ್ರಗಳು ಇರುವವರೆಗೂ ಈ ಧ್ವಜ ಹಾರುತ್ತಿರಲಿ; ನಾಡು ಇದಕ್ಕೆ ನಮಿಸುತ್ತಿರಲಿ' ಎಂದು ಇರಬಹುದೋ ಏನೋ.

ಇದಾದ ಹತ್ತು ವರುಷಗಳ ಮೇಲೆ, ದೇವಿ ಆನಿಬೆಸೆಂಟ್ ಅವರ 'ಹೋಂ ರೂಲ್' ಚಳುವಳಿಯ ಕಾಲದಲ್ಲಿ ಎರಡನೆಯ ಧ್ವಜವೊಂದು ಹುಟ್ಟಿಕೊಂಡಿತು.



ಇದರಲ್ಲಿ ಎರಡೇ ಮುಖ್ಯ ವರ್ಣಗಳು: ಮೇಲಿನಿಂದ ಕೆಳಕ್ಕೆ, ಒಂದರ ಪಕ್ಕದಲ್ಲಿ ಒಂದರಂತೆ ಐದು ಕೆಂಪು ಅಡ್ಡಪಟ್ಟೆ, ನಾಲ್ಕು ಹಸಿರು ಅಡ್ಡಪಟ್ಟೆ. ಧ್ವಜದ ಎಡಗಡೆಯ ಮೇಲುಮೂಲೆಯಲ್ಲಿ ಸಣ್ಣ 'ಯೂನಿಯನ್ ಜಾಕ್'. ಧ್ವಜದ ಮಿಕ್ಕ ಮೈಯಲ್ಲಿ ದೊಡ್ಡದಾಗಿ 'ಸಪ್ತರ್ಷಿಮಂಡಲ'.

ಇದರಲ್ಲಿ ವರ್ಣಗಳು ಏನು ಸೂಚಿಸುತ್ತವೆಯೋ ತಿಳಿಯದು. ಆದರೆ 'ಯೂನಿಯನ್ ಜಾಕ್'ನಿಂದ ಭಾರತ-ಬ್ರಿಟನ್ನುಗಳ ಬಾಂಧವ್ಯವೂ 'ಸಪ್ತರ್ಷಿಮಂಡಲ'ದಿಂದ ಧ್ವಜ ಧ್ರುವವಾಗಿರಲೆಂಬ ಭಾವನೆಯೂ ತೋರಿಬರುವಂತಿವೆ.

ಈ ಬಾವುಟಕ್ಕೆ ಆಗಿನ ದಿನಗಳಲ್ಲಿ (೧೯೧೬) ಮನ್ನಣೆಯಿತ್ತು.

೧೯೧೯ ರಲ್ಲಿ ಗಾಂಧೀಜಿ ಕಾಂಗ್ರೆಸ್ಸನ್ನು ಪ್ರವೇಶ ಮಾಡಿದ ಮೇಲೆ, ಈಗಿರುವ ರಾಷ್ಟ್ರಪತಾಕೆಯ ಶೈಶವ ಪ್ರಾರಂಭವಾಯಿತೆನ್ನಬಹುದು.

೧೯೨೧ಕ್ಕೆ ಹಿಂದೆಯೇ ಮಸುಲಿಪಟ್ಟಣದ ರಾಷ್ಟ್ರೀಯ ಕಾಲೇಜಿನ ಶ್ರೀ ಪಿ. ವೆಂಕಯ್ಯ ಎಂಬವರು, ನಾಲ್ಕು ವರ್ಷಗಳ ಕಾಲ, ಪ್ರತಿ ಕಾಂಗ್ರೆಸ್ ಅಧಿವೇಶನದಲ್ಲೂ ರಾಷ್ಟ್ರಧ್ವಜದ ಮಾದರಿಗಳನ್ನು ಮಂಡಿಸುತ್ತಿದ್ದರಂತೆ. ಆದರೆ ಅದು ಯಾರ ಗಮನವನ್ನೂ ಹಿಡಿದಿಡುವಂತಿರಲಿಲ್ಲ.

ಅನಂತರ ಪಂಜಾಬಿನ ಲಾಲಾ ಹಂಸರಾಜ್ ಎಂಬವರು "ಭಾರತದ ರಾಷ್ಟ್ರಧ್ವಜದಲ್ಲಿ 'ಚರಖ'ದ ಚಿಹ್ನೆಯಿರಬೇಕು" ಎಂದು ಹೇಳಿದ ಸೂಚನೆ ಗಾಂಧಿಯವರ ಮನಸ್ಸಿಗೆ ಮೆಚ್ಚುಗೆಯಾಯಿತಂತೆ. ಅನಂತರವೇ ಬೆಜವಾಡಾ ಕಾಂಗ್ರೆಸ್ ಅಧಿವೇಶನದಲ್ಲಿ, ಗಾಂಧೀಜಿಯ ಅಪ್ಪಣೆಯಂತೆ, ಅವರ ವರ್ಣನೆಗೆ ಅನುಸಾರವಾಗಿ, ಶ್ರೀ ಪಿ. ವೆಂಕಯ್ಯನವರೇ ಚರಖಚಿಹ್ನೆಯ ತ್ರಿವರ್ಣಧ್ವಜವನ್ನು ರಚಿಸಿಕೊಟ್ಟರಂತೆ.

ಇದನ್ನು ಗಾಂಧೀಜಿ ಒಪ್ಪಿಕೊಂಡರೂ, ಅನಂತರ ಹತ್ತು ವರುಷಗಳ ಕಾಲ ಕಾಂಗ್ರೆಸ್ ಅಧಿವೇಶನಗಳಲ್ಲೆಲ್ಲ ಇದನ್ನೇ ಹಾರಿಸುತ್ತಿದ್ದರೂ, ಕಾಂಗ್ರೆಸ್ ಕಾರ್ಯಕಾರಿಮಂಡಲದ ಅಂಗೀಕಾರಮುದ್ರೆ ಇದಕ್ಕೆ ಬಿದ್ದಿರಲಿಲ್ಲ.

ಗಾಂಧೀಜಿ ಹೀಗೆ ಮೊದಲ ಬಾರಿಗೆ ಕೊಟ್ಟ ಜನಪ್ರಿಯವಾದ ರಾಷ್ಟ್ರಧ್ವಜದಲ್ಲಿ ಮೇಲಿನಿಂದ ಕ್ರಮವಾಗಿ ಬಿಳುಪು, ಹಸಿರು, ಕೆಂಪು ಬಣ್ಣಗಳೂ ಆ ಮೂರು ಬಣ್ಣಗಳನ್ನೂ ಮುಟ್ಟುವಂತೆ ಒಂದು ದೊಡ್ಡ ಚರಖದ ಚಿಹ್ನೆಯೂ ಇತ್ತು.



ಹೀಗೆ ಸರಳಸುಂದರವಾದ ಧ್ವಜದಲ್ಲಿನ ಮೂರು ವರ್ಣಗಳೂ ದೇಶದ ಜನಗಣಗಳನ್ನು ಸೂಚಿಸುತ್ತವೆ; ಹಿಂದೂಗಳಿಗೆ ಕೆಂಪುಬಣ್ಣ, ಮುಸ್ಲಿಮರಿಗೆ ಹಸಿರುಬಣ್ಣ, ಇನ್ನುಳಿದ ಅಲ್ಪಸಂಖ್ಯಾತರಿಗೆ ಒಟ್ಟು ಬಿಳಿಯ ಬಣ್ಣ; ಈ ಮೂವರಿಗೂ ಒಂದೇ ಸಮನಾಗಿ ಪ್ರಾಣಾಧಾರವೆನಿಸುವ ಕೈರಾಟೆ ಮೂವರನ್ನೂ ಮುಟ್ಟುವಂತೆ ಮೂರು ವರ್ಣಗಳ ಮೇಲೂ ಮಂಡಿಸಿದೆ—ಎಂದು ಅದಕ್ಕೆ ಆಗ ಅರ್ಥ ಹೇಳಿದರು.

ಹತ್ತು ವರುಷ ಕಳೆಯುವ ವೇಳೆಗೆ, 'ಬಣ್ಣ ಬೇರೆ ಮೂರು ಆಗಿದ್ದರೂ ಬಾವುಟದಲ್ಲಿ ಹೇಗೆ ಒಂದರ ಪಕ್ಕದಲ್ಲಿ ಒಂದು ಹೊಂದಿಕೊಂಡು ಸಮರಸವಾಗಿ

ಇವೆಯೋ ಅದರ ಹಾಗೆಯೇ—ವ್ಯವಹಾರಕ್ಕೆ ಹಿಂದೂ, ಮುಸ್ಲಿಂ, ಇನ್ನಿತರ ಎಂದು ಜನಗಣನೆ ಮೂರಾಗಿದ್ದರೂ ಎಲ್ಲರೂ ಒಂದಾಗಿ ಹೊಂದಿಕೊಂಡು ಸಮರಸವಾಗಿ ಬಾಳಬೇಕು' ಎಂಬ ಭಾವನೆ ಬೆಳೆದುಬಂದಿತ್ತು. ಆದ್ದರಿಂದಲೇ ೧೯೩೧ ರಲ್ಲಿ ಈ ಮೂರು ವರ್ಣಗಳಿಗೂ ಹಿಂದೆ ಕೊಟ್ಟಿದ್ದ ಮತಸಂಬಂಧವಾದ ಅರ್ಥವನ್ನು ಕಿತ್ತು, ಆ ಬಣ್ಣಗಳನ್ನು ಕೆಲವು ಗುಣಗಳ ಗುರುತೆಂದು ಸ್ವೀಕರಿಸಿ ನಿಲ್ಲಿಸಿಕೊಂಡರು.

೧೯೩೧ ರಲ್ಲಿ ಸರ್ವಸಮರ್ಪಕವಾದ ರಾಷ್ಟ್ರಧ್ವಜವೊಂದನ್ನು ರಚಿಸಿ ಒಪ್ಪಿಸುವಂತೆ ಕಾಂಗ್ರೆಸ್ಸು ಒಂದು ಸಮಿತಿಯನ್ನು ನೇಮಿಸಿತು. ಆ ಸಮಿತಿ ಸೂಚಿಸಿದ



ಪತಾಕೆ ಬರಿಯ ಶುದ್ಧ ಕೇಸರಿಯೊಂದೇ ವರ್ಣವಾಗಿದ್ದು, ಅದರ ಎಡಗಡೆಯ ಮೇಲುತುದಿಯಲ್ಲಿ ಸಣ್ಣದೊಂದು ಚರಖವಿತ್ತು. ಕಾಂಗ್ರೆಸ್ಸು ಅದನ್ನು ಒಪ್ಪಲಿಲ್ಲ.



ಅನಂತರ ಕಾಂಗ್ರೆಸ್ ಕಾರ್ಯಕಾರಿ ಸಮಿತಿ, ಹಿಂದೆಯೇ ಗಾಂಧೀಜಿ ಸೂಚಿಸಿದ ಚರಖಮುದ್ರಿತ ತ್ರಿವರ್ಣಧ್ವಜವನ್ನೇ ಆಶ್ರಯಿಸಿ, ಅದರಲ್ಲಿ ಯುಕ್ತವಾದ ಕೆಲವು ಬದಲಾವಣೆಗಳನ್ನು ಮಾಡಿ, ಅದನ್ನು ಅಂಗೀಕರಿಸಿದರು.

ಈ ಹೊಸ ಬಾವುಟದಲ್ಲಿ ವರ್ಣಗಳ ಕ್ರಮ ಮೇಲಿನಿಂದ ಕೆಳಕ್ಕೆ ಕೇಸರಿ, ಬಿಳುಪು, ಹಸಿರು—ಹೀಗಿತ್ತು. ಈ ವರ್ಣಗಳಾದರೂ ಮತಗಳ ಗುರುತೆಂಬ ಅರ್ಥವನ್ನು ಕಳೆದುಕೊಂಡು, ಗುಣಗಳ ಗುರುತೆಂಬ ಅರ್ಥವನ್ನು ಕಟ್ಟಿಕೊಂಡವು. ಕೇಸರಿವರ್ಣವು ಧೈರ್ಯತ್ಯಾಗಗಳನ್ನೂ, ಬಿಳುಪು ಸತ್ಯಶಾಂತಿಗಳನ್ನೂ, ಹಸಿರು ಶ್ರದ್ಧಾ ಶಕ್ತಿಗಳನ್ನೂ ಸೂಚಿಸುವುವೆಂದು ವರ್ಣಿಸಿದರು. ಅದುವರೆಗೆ ಮೂರು ವರ್ಣ ಗಳನ್ನೂ ಮುಟ್ಟುತ್ತಿದ್ದ ಚರಖವನ್ನು ನಡುವಣ ಬಿಳಿಯ ಹಿನ್ನೆಲೆಯ ಮೇಲೆ ಮಾತ್ರ ಚಿತ್ರಿಸಲಾಗುವಂತೆ ಚಿಕ್ಕದು ಮಾಡಿದರು.

ಈ ಮಾರ್ಪಾಟುಗಳಿಂದ ಆ ಹತ್ತು ವರುಷಗಳ ಪಳಕೆಯ ಧ್ವಜ ಇನ್ನಷ್ಟು ಅರ್ಥಪೂರ್ಣವಾಯಿತು, ಕಣ್ಣಿಗೆ ಇನ್ನಷ್ಟು ಸುಂದರವಾಯಿತು.

ಇದನ್ನು ಕಾಂಗ್ರೆಸ್ ಒಪ್ಪಿಕೊಂಡಿತು, ನಾಡು ಒಪ್ಪಿಕೊಂಡಿತು. ಇದನ್ನು ಎತ್ತಿ ಹಿಡಿಯುವುದಕ್ಕಾಗಿ ಅನೇಕ ದೇಶಪ್ರೇಮಿಗಳು ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಿದರು. ಅಂದಿನಿಂದ, ೧೯೩೧ ರಿಂದ ಪ್ರತಿ ವರುಷವೂ ಏಪ್ರಿಲ್ ೨೬ ನೆಯ ದಿನವನ್ನು 'ರಾಷ್ಟ್ರಧ್ವಜದ ದಿನ' ಎಂದು ಆಚರಿಸುವ ರೂಢಿ ಬಂತು.

ಇಷ್ಟಾದರೂ, ದೇಶದ ಬಹುಪಾಲಿನ ಜನ ಈ ಧ್ವಜವನ್ನೇ ರಾಷ್ಟ್ರಧ್ವಜವೆಂದು ವ್ಯವಹರಿಸಿ ಗೌರವಿಸುತ್ತಿದ್ದರೂ, ಅದನ್ನು ಕೇವಲ 'ಕಾಂಗ್ರೆಸ್ ಧ್ವಜ'ವೆಂದೂ ರಾಷ್ಟ್ರದ ಒಂದು ರಾಜಕೀಯ ಪಕ್ಷದ ಧ್ವಜವೆಂದೂ ಕಾಣುವವರೂ ಇಲ್ಲದೆ ಇರಲಿಲ್ಲ. ಇಂಥವರನ್ನು ಕೂಡ ತನಗೆ ಒಲಿಸಿಕೊಳ್ಳುವ, ಸರ್ವಸಮ್ಮತವಾದ, ಹೊಸ ಧ್ವಜದ ಆವಶ್ಯಕತೆ ಈಚೆಗೆ ತಲೆದೋರಿತು—ಬ್ರಿಟಿಷರು ಭಾರತವನ್ನು ಬಿಟ್ಟುಹೋಗಲು ನಿಶ್ಚಯಿಸಿ, ಭಾರತ ಸ್ವತಂತ್ರವಾದಾಗ.

ಅಪಾರವಾದ ಜನತೆಯ ಪ್ರೇಮಗೌರವಗಳನ್ನು ಸಂಪಾದಿಸಿದ್ದ ಚರಖಮುದ್ರಿತ ತ್ರಿವರ್ಣಧ್ವಜಕ್ಕೆ ಒಂದು ಸಣ್ಣ ಪ್ರತಿಪಕ್ಷವಿದ್ದಿತೆಂಬ ಅಷ್ಟೇ ಕಾರಣವಲ್ಲ, ಇನ್ನೂ ಒಂದು ಒಳ್ಳೆಯ ಕಾರಣವಿದ್ದುದರಿಂದಲೂ ಹೊಸಧ್ವಜ ಬೇಕು ಎನ್ನಿಸಿತ್ತು.

ಹಳೆಯ ಧ್ವಜ ಧ್ವಜಸ್ತಂಭದಿಂದ ಬಲಗಡೆಗೆ ಹಾರುತ್ತಿದ್ದಾಗ, ಅದರೊಳಗಿನ ಚರಖದ ಕದಿರು ಬಲಗೈಕಡೆಗೆ ಇರುತ್ತಿದ್ದಿತಷ್ಟೆ. ಆದರೆ ಅದೇ ಧ್ವಜವನ್ನು ಹಿಂದು ಗಡೆಯಿಂದ ನೋಡಿದಾಗ ಕದಿರು ಎಡಗೈಕಡೆಗೆ ಆಗುತ್ತಿತ್ತು. ಇದು ನಿಜವಾಗಿಯೂ,

ಸಣ್ಣದಾದರೂ, ಧ್ವಜದಲ್ಲಿ ದೋಷವೇ. ಧ್ವಜದಲ್ಲಿರುವ ಪ್ರತಿಯೊಂದು ಚಿಹ್ನೆಯ ವಿನ್ಯಾಸಕ್ಕೂ ನಿಷ್ಕೃಷ್ಟವಾದ ಅರ್ಥವಿರುವಾಗ, ಧ್ವಜ ಎರಡು ಕಡೆಗಳಿಂದ ನೋಡಿದರೂ ಒಂದೇ ಸಮನಾಗಿ ಕಾಣಬೇಕು. ಇಲ್ಲದಿದ್ದರೆ, ಸೌಂದರ್ಯದ ಮಾತು ಹಾಗಿರಲಿ, ಅರ್ಥ ಕೆಡುತ್ತದೆ. ಈ ಕಾರಣದಿಂದಲೂ ಹೊಸಧ್ವಜದ ಆವಶ್ಯಕತೆ ಹೆಚ್ಚು ಕಂಡುಬಂತು.

ಆದರೆ ಅನೇಕ ವರ್ಷಗಳು ಜನ ನಡೆಸಿದ ತಪಸ್ಸಿನಿಂದ ಅತಿಶಯವಾದ ಮಹಿಮೆಯನ್ನು ಆರ್ಜಿಸಿ ಮಂಗಳರೂಪಿಯಾದ ಚರಖಮುದ್ರಿತತ್ರಿವರ್ಣವನ್ನು ಒಮ್ಮೆಗೇ ಕೈಬಿಟ್ಟು, ಹೊಸಬಾವುಟವನ್ನು ಸೃಷ್ಟಿಸುವುದು ಸಹಸಾ ಸಾಧ್ಯವಾಗಬಹುದಾಗಿದ್ದರೂ ಹಾಗೆ ಮಾಡಿದ್ದರೆ ಅದು ವಿಶ್ವಾಮಿತ್ರನ ಸೃಷ್ಟಿಯಂತೆ ವಿಪರೀತವಾಗುತ್ತಿತ್ತು. ಆ ಕಾರಣದಿಂದಲೇ ವಿವೇಕಶಾಲಿಗಳಾದ ನಮ್ಮ ನಾಡಿನ ಹಿರಿಯರು ಚಿರಪರಿಚಿತವಾದ ಪತಾಕೆಯನ್ನೇ ಉಳಿಸಿಕೊಂಡು, ಅದರ ನಡುವಣ 'ಚರಖ'ಕ್ಕೆ ಪ್ರತಿಯಾಗಿ 'ಚಕ್ರ'ದ ಚಿಹ್ನೆಯನ್ನಿಟ್ಟು, ಅದರ ಗೌರವವನ್ನು ಮತ್ತಷ್ಟು ಬೆಳೆಸಿದರು.



ಈ ಹೊಸ ಧ್ವಜದಲ್ಲಿಯಾದರೂ ಹಿಂದಿನದರಲ್ಲಿ ಇದ್ದ ಹಾಗೆಯೇ **ಕೇಸರಿ, ಬಿಳುಪು, ಹಸಿರು ಎಂಬ ಮೂರು ವರ್ಣಗಳು. ನಡುವಣ ಬಿಳಿಯ ಒಡಲಿನಲ್ಲಿ ನೀಲವರ್ಣದ ಚಕ್ರ.** ಇದಿಷ್ಟೇ ನಮ್ಮ ಹೊಸ ರಾಷ್ಟ್ರಧ್ವಜದ ವರ್ಣನೆ.

ಇಷ್ಟು ಸರಳವಾದರೂ ಆ ನಾಲ್ಕು ವರ್ಣಗಳ ಸಮರಸವಾದ ಮಿಳನ, ಮಧ್ಯದ ಚಕ್ರದ ಆ ಸರ್ವಪ್ರಭುತ್ವ, ಆರೋಹಣ ಮಾಡಿದಾಗ ಈ ಧ್ವಜ ಹಾರುವ ಲಹರೀ—ಇದರ ಆನಂದ ಕಣ್ಣಿನಿಂದ ಕಂಡು ಅನುಭವಿಸಬೇಕಾದ್ದು.

ಪುರಾಣಗಳಲ್ಲಿ ನಾವು ವಿಷ್ಣುವಿನ ಗರುಡಧ್ವಜವನ್ನೂ ಈಶ್ವರನ ವೃಷಕೇತನವನ್ನೂ ಕಂದರ್ಪನ ಮೀನಕೇತನವನ್ನೂ ಸುಯೋಧನನ ಪನ್ನಗಪತಾಕೆಯನ್ನೂ ಅರ್ಜುನನ ಕಪಿಧ್ವಜವನ್ನೂ ಇನ್ನೂ ಇದರಂತಹ ಹಲವಾರು ಬಾವುಟಗಳನ್ನು ಓದಿ ಕೇಳಿದ್ದೇವೆ. ಇದರಂತೆಯೇ ಚರಿತ್ರೆಯಲ್ಲಿಯಾದರೂ ಚಾಲುಕ್ಯರ ವರಾಹಧ್ವಜ, ರಾಷ್ಟ್ರಕೂಟರ ಗರುಡಧ್ವಜ, ಕದಂಬರ ಸಿಂಹಧ್ವಜ, ಕಲಚೂರ್ಯರ ವೃಷಭಧ್ವಜ, ಹೊಯ್ಸಳರ ಗಜ-ಹೊಯ್ಸಳಧ್ವಜ, ವಿಜಯನಗರದ ಮಹಾವರಾಹಧ್ವಜ—ಮುಂತಾದ ಅನೇಕ ಪತಾಕೆಗಳ ಗುರುತಾಗಿದೆ. ಆದರೂ ಈ ನಮ್ಮ ಹೊಸ ಭಾರತಧ್ವಜದಲ್ಲಿನ ಚಕ್ರಚಿಹ್ನೆಗೆ ಇರುವ ಅರ್ಥವ್ಯಾಪ್ತಿ ಬೇರೆ ಯಾವ ಚಿಹ್ನೆಗೂ ಇಲ್ಲವೆಂದು ಹೇಳಿದರೆ ತಪ್ಪಾಗದು.

* * * *

ಸ್ಥಳದಿಂದ ಸ್ಥಳಕ್ಕೆ ಮಿತಾಯಾಸದಿಂದ ಪ್ರಯಾಣಮಾಡಲು ಸಹಾಯಕವಾಗುವ ರಥಗಳ ಮುಖ್ಯವಾದ ಭಾಗ—ಚಕ್ರ.

ಜನಸಾಮಾನ್ಯರು ಬಳಸುವ ಕುಡಿಕೆ ಮಡಿಕೆಗಳನ್ನು ಸೃಷ್ಟಿಸುವುದಕ್ಕಾಗಿ ಕುಂಬಾರನು ಉಪಯೋಗಿಸುವ ಉಪಕರಣ—ಚಕ್ರ.

ಜನಸಾಮಾನ್ಯರು ಬಳಸುವ ಬಟ್ಟೆಗೆ ಬೇಕಾದ ಹತ್ತಿಯ ನೂಲನ್ನು ನೂತುಕೊಡುವ ಚರಖದ ಮುಖ್ಯವಾದ ಅಂಗ—ಚಕ್ರ.

ಜನರನ್ನು ಪಾಲಿಸುವ ರಾಜನು ದಿಗ್ವಿಜಯ ಹೊರಟ ಕಾಲದಲ್ಲಿ, ಅವನಿಗೆ ವಿಜಯವನ್ನು ಸಂಪಾದಿಸಿಕೊಡುವ ಸಾಧನ, ಅವನಿಗೆ ಚಕ್ರವರ್ತಿಪದವಿಯನ್ನು ಸಾಧಿಸಿಕೊಡುವ ಸಾಧನ—ಚಕ್ರ.

ಯೋಗಿಗಳು ತಮ್ಮ ಇಷ್ಟಾರ್ಥವನ್ನು ಪಡೆಯುವುದಕ್ಕೆ ಸಾಧನಗಳಾಗಿ ಸುಷುಮ್ನಾ ನಾಡಿಯ ಅಡಿಯ ಕುಂಡಲಿನಿಯಿಂದ ಹಿಡಿದು ಅದೇ ನಾಡಿಯ ತುದಿಯ ಸಹಸ್ರಾರದವರೆಗಿನ ಶಕ್ತಿಕೇಂದ್ರಗಳನ್ನು ಕಮಲದಾಕಾರದ ಚಕ್ರಗಳೆಂದು ಕರೆಯುತ್ತಾರೆ.

ಜಗತ್ತಿನಲ್ಲಿರುವ ಶಿಷ್ಟರನ್ನು ರಕ್ಷಿಸುವುದಕ್ಕಾಗಿ, ದುಷ್ಟರನ್ನು ಶಿಕ್ಷಿಸುವುದಕ್ಕಾಗಿ ಲೋಕನಾಯಕನಾದ ನಾರಾಯಣನು ಹಿಡಿದಿರುವ ಅಸ್ತ್ರ—ಸುದರ್ಶನಚಕ್ರ.

ಅನಾದಿ, ಅನಂತ, ಶೂನ್ಯ, ಪೂರ್ಣ ಮೊದಲಾದ ಪರಾತ್‌ಪರ ಭಾವನೆಗಳು ಕಣ್ಣೆದುರಿಗೆ ಉಚಿತವಾಗಿ ನಿಲ್ಲಬೇಕಾದರೆ ಚಕ್ರದ ಆಕಾರವನ್ನೇ ಆಶ್ರಯಿಸಬೇಕು.

ತಡೆಯಿಲ್ಲದೆ ಮುಂದೆ ಓಡುತ್ತಿರುವ ಪ್ರಗತಿಚರ್ಯೆಯನ್ನು ತೋರಿಸಬೇಕಾದರೆ ಚಕ್ರದ ಗುರುತೇ ಶರಣು.

ನಾವು ವಾಸಿಸುವ ಭೂಮಿಯನ್ನೂ, ನಮಗೆ ಹಗಲುರಾತ್ರಿಗಳ ಕಣ್ಣಾದ ಸೂರ್ಯಚಂದ್ರರನ್ನೂ, ಆ ಅವುಗಳ ನಿತ್ಯಗಮನವನ್ನೂ ಚಿತ್ರಿಸುವುದಕ್ಕೆ ಚಕ್ರದ ಆಕಾರ ಹೊರತು ಬೇರೆ ಗತಿಯಿಲ್ಲ.

ಕೊನೆಗಾಣದ ಕಾಲವನ್ನು ಅಳತೆಮಾಡಬೇಕೆಂಬ, ಅಸಾಧ್ಯವಾದುದನ್ನು ಸಾಧಿಸಬೇಕೆಂಬ, ಮನುಷ್ಯನ ಸಹಜವಾದ ಆಕಾಂಕ್ಷೆ ಮಿತವಾಗಿಯಾದರೂ ಸಾಧಿತ ವಾದದ್ದು ಈ ಚಕ್ರದ ಕಲ್ಪನೆಯಿಂದಲೇ. ಋತುಗಳ ಚಕ್ರವೂ, ಕಾಲಚಕ್ರವೂ ಈ ಚಕ್ರಕಲ್ಪನೆಯ ಕೂಸುಗಳು.

ಸರ್ವವ್ಯಾಪಿಯಾದ ಸರ್ವಗ್ರಾಸಿಯಾದ ಈ ಕಾಲವು ತಂದುಕೊಡುವ ಶೀತೋಷ್ಣಗಳನ್ನೂ, ಸುಖದುಃಖಗಳನ್ನೂ, ಲಾಭಾಲಾಭಗಳನ್ನೂ, ನಿಂದಾಸ್ತುತಿಗಳನ್ನೂ ಸಮಚಿತ್ತದಿಂದ ಅನುಭವಿಸಿಕೊಳ್ಳುವ ಧೈರ್ಯಸ್ಥೈರ್ಯಗಳನ್ನು ಈ ಚಕ್ರದ ಆಕಾರವು ನಮಗೆ ಕಲಿಸಿಕೊಡುತ್ತದೆ. ಭಾಗ್ಯಚಕ್ರದ ಮೇಲುಗಡೆಯ ಅಂಚನ್ನು ಗಮನಿಸಿದಾಗ 'ಇದು ಸ್ಥಿರವಲ್ಲ. ಇಂದಲ್ಲ ನಾಳೆ ಕೆಳಗೆ ಇಳಿದೀತು' ಎಂಬ ವಿನಯವೂ, ಅದೇ ಭಾಗ್ಯಚಕ್ರದ ಕೆಳಗಡೆಯ ಅಂಚನ್ನು ಗಮನಿಸಿದಾಗ 'ಇದೂ ಸ್ಥಿರವಲ್ಲ. ಇಂದಲ್ಲ, ನಾಳೆ ಮೇಲೆ ಏರೀತು' ಎಂಬ ಧೈರ್ಯವೂ ಉತ್ಪನ್ನವಾಗುತ್ತದೆ.

ಯಾವ ಆ ಒಂದಾದ 'ಏಕ'ವನ್ನು ನಮ್ಮ ಹಿಂದಿನ ಋಷಿಗಳು **ಋತ, ಸತ್ಯ, ಬ್ರಹ್ಮ, ಧರ್ಮ, ಸರ್ವ** ಎಂಬ ಅನೇಕ ಹೆಸರುಗಳಿಂದ ಕರೆದರೋ ಅದನ್ನು ಅವರೇ 'ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಂ' ಎಂದು ವರ್ಣಿಸಿದರು. ಯಾವುದು ಅಖಂಡವಾಗಿದೆಯೋ, ಯಾವುದು ಮಂಡಲದ ಆಕಾರದಲ್ಲಿದೆಯೋ, ಯಾವುದರಿಂದ ಚರವೂ ಅಚರವೂ ವ್ಯಾಪಿಸಲ್ಪಟ್ಟಿರುವುದೋ—ಆ ಅದನ್ನು ಚಿತ್ರಿಸುವ ಸಂದರ್ಭದಲ್ಲಿ ಬಳಕೆಯಾದದ್ದು ಈ '**ಧರ್ಮಚಕ್ರ**'ದ ಕಲ್ಪನೆ.

ಈ ಆರ್ಯವಾದ 'ಧರ್ಮಚಕ್ರ'ದ ಕಲ್ಪನೆಯೇ ನಮಗೆ ಜೈನರಲ್ಲಿಯೂ ಕಾಣು ತ್ತದೆ. ಅವರ ತೀರ್ಥಂಕರರು ಧರ್ಮೋಪದೇಶಮಾಡುತ್ತ ವಿಹಾರಮಾಡಿದ ಕಡೆ ಯಲ್ಲೆಲ್ಲ ಅವರ **'ದಯಾಧ್ವಜ'ವೂ 'ಧರ್ಮಚಕ್ರ'**ವೂ ಭಕ್ತರ ಹೃದಯದಲ್ಲಿ ಅಮೃತವರ್ಷವನ್ನು ಕರೆಯುತ್ತ ಕಂಗೊಳಿಸುತ್ತಿರುತ್ತದೆ.

ಜೈನರಾದ ಅನಂತರ ಬಂದ ಬೌದ್ಧರ ಮತಸ್ಥಾಪಕನಾದ ಭಗವಾನ್ ಗೌತಮ ಬುದ್ಧನು ತನ್ನ 'ಧರ್ಮಚಕ್ರ ಪ್ರವರ್ತನ'ದಿಂದ ಈ ಆರ್ಷೇಯವಾದ "ಧರ್ಮ ಚಕ್ರ"ದ ಕಲ್ಪನೆಯನ್ನು ಜನಸಾಮಾನ್ಯರ ವ್ಯವಹಾರಕ್ಕೆ ತಂದು ವಿಸ್ತರಗೊಳಿಸಿದನು.

* * * * *

ಇಷ್ಟೆಲ್ಲಾ ಅರ್ಥಸ್ವಾರಸ್ಯವನ್ನು ಒಳಗೊಂಡಿರುವ 'ಧರ್ಮಚಕ್ರ'ಕ್ಕೆ ಸಿಂಹಾ ಸನದ ಹಾಗಿರುವ ಪಾವುಡದ ತ್ರಿವರ್ಣವಾದರೂ ಉಚಿತವಾದ ಅರ್ಥವುಳ್ಳದ್ದೇ.

ಕೆಳಗಡೆ ಹರಡಿರುವ ಹಸಿರು ಸಸ್ಯಶಾಲಿನಿಯಾದ, 'ಸಸ್ಯಶ್ಯಾಮಲೆ'ಯಾದ ಭೂಮಾತೆಯ ಪ್ರತೀಕ. ಕೃಷಿ, ಕೈಗಾರಿಕೆಗಳ ಸಮೃದ್ಧಿಯ ಗುರುತು. ಇದೇ ಸೃಷ್ಟಿ.

ಅದರ ಮೇಲಿನ ಬಿಳಿಯ ಬಣ್ಣವು ಸತ್ಯ, ಶಾಂತಿ, ಸಮವಾಯ, ನೈರ್ಮಲ್ಯ, ವಿಶುದ್ಧಿಗಳಿಗೆ ಗುರುತು. ಏಳು ಬಣ್ಣಗಳನ್ನೂ ಉಚಿತವಾದ ಪ್ರಮಾಣಗಳಲ್ಲಿ ಒಳ ಗೊಂಡು ಬಿಳಿಯ ಬಣ್ಣವಾದ ಹಾಗೆ, ಭೂಮಿ ಬೆಳೆದುದೆಲ್ಲವನ್ನೂ ಉಚಿತಪ್ರಮಾಣ ಗಳಲ್ಲಿ ಕೂಡಿಟ್ಟುಕೊಂಡು ಕಾಪಾಡುವುದಕ್ಕೆ ಈ ಬಿಳಿಯ ಬಣ್ಣವು ಗುರುತು. ಇದೇ ಸ್ಥಿತಿ.

ಇದರ ಮೇಲಿನ ಕೇಸರಿವರ್ಣ ಸಂನ್ಯಾಸದ, ತ್ಯಾಗದ ವರ್ಣ. ಭೂಮಿಯಲ್ಲಿ ಹುಟ್ಟಿದುದನ್ನು, ಜನಗಳು ಕಾಪಾಡಿದುದನ್ನು, ಜನಗಳು ಸದ್ವಿನಿಯೋಗಮಾಡಬೇಕು; ಉಳ್ಳವರು ಇಲ್ಲದ ಕಡೆಗೆ ಇಡಬೇಕು; 'ತೇನ ತ್ಯಕ್ತೇನ ಭುಂಜೀಥಾಃ' ಎಂಬ ಈಶಾವಾಸ್ಯದ ಧರ್ಮಘೋಷದಂತೆ ನಡೆಯಬೇಕು—ಎಂದು ಎಚ್ಚರಿಸುವುದಕ್ಕೆ ಈ ಕೇಸರಿವರ್ಣ. ಇದೇ ಲಯ.

"ಈ ಸೃಷ್ಟಿ, ಸ್ಥಿತಿ, ಲಯಗಳು ಒಂದನ್ನು ಒಂದು ಅವಲಂಬಿಸಿಕೊಂಡಿವೆ. **ನಾಭಿ ಯಿಂದ ಹೊರಟ ಅರಗಳು** ಚಕ್ರದ **ನೇಮಿಯನ್ನು** ಬಿಗಿಹಿಡಿದು, ಒಂದೊಂದೂ ತನ್ನ

ಧರ್ಮವನ್ನು ನಡಸುವುದರಿಂದ ಚಕ್ರ ಸುಗಮವಾಗಿ ಉರುಳುವಂತೆ, ಧರ್ಮವನ್ನು ಆಶ್ರಯಿಸಿ ನಡೆದರೆ ಪ್ರಗತಿಗೆ ಚ್ಯುತಿಯಿಲ್ಲ" ಎಂಬುದನ್ನು ಈ ತ್ರಿವರ್ಣಧ್ವಜದ ನಡುವಿನ ಚಕ್ರ ಸಾರುತ್ತದೆ.

* * * * *

ಹೀಗೆ ಹಸಿರು ಬಿಳುಪು ಕೇಸರಿಗಳ ನಡುವೆ ಬಿಳಿಯ ಒಡಲಿನ ಮೇಲೆ **ನೀಲ ವರ್ಣದ ಚಕ್ರ**ವನ್ನು ಮುದ್ರಿಸಿಕೊಂಡ ಈ ಪತಾಕೆಯು "ನೀಲವಾದ ಸಾಗರದಂತೆ ತಾನು ಗಂಭೀರವಾಗಬೇಕು, ನೀಲವಾದ ಆಕಾಶದಂತೆ ತಾನು ಉನ್ನತವಾಗಬೇಕು, ನೀಲವಾದ ಆ ಎರಡರಂತೆ ತಾನು ಸ್ವತಂತ್ರವಾಗಿರಬೇಕು, ನೀಲವಾದ ಮೇಘದಂತೆ ತಾನು ಸದಾ ಅಮೃತದ ಮಳೆಗರೆಯಬೇಕು, ನೀಲಮೇಘಶ್ಯಾಮನಾದ ವಿಷ್ಣುವಿನಂತೆ ತಾನು ಪ್ರೇಮದಿಂದ ಸರ್ವವ್ಯಾಪಿಯಾಗಬೇಕು" ಎಂಬ ಈ ನಾಡಿನ ಆಕಾಂಕ್ಷೆಯನ್ನು ಘೋಷಿಸುತ್ತದೆ.

ಇಷ್ಟೆಲ್ಲಾ ಅರ್ಥಸಂಪತ್ತಿಯಿರುವ ನಮ್ಮ ಈ ತ್ರಿವರ್ಣಧ್ವಜದ ನಡುವಿನ 'ಚಕ್ರ'ವನ್ನು **'ಸಾರನಾಥದ ಅಶೋಕಚಕ್ರ'**ವೆಂದು ಕರೆದಿರುವುದರಿಂದ ಆ ಚಿಹ್ನೆಯ ಅರ್ಥ ಇನ್ನಷ್ಟು ವಿಸ್ತಾರಹೊಂದಿ, ಧ್ವಜದ ಮೊದಲಿನ ಉನ್ನತಿ ಮಹೋನ್ನತಿಯಾಗಿದೆ.

# ಸಾರನಾಥ

## (ಒಂದು ಪವಿತ್ರ ಕ್ಷೇತ್ರ)



ಸಿಂಹಾಸನದಲ್ಲಿ ಮುಂಡಿಸಿರುವ ಚಕ್ರವೇ 'ಧರ್ಮ'. ಆ 'ಧರ್ಮ'ವನ್ನು ಸೇವಿಸುತ್ತ ಶರಣಾಗಿರುವ 'ಸಾರಂಗ'ಗಳು ಇರುವ ಸ್ಥಳವೇ 'ಸಾರಂಗನಾಥ'; ಅಥವಾ ಸಂಗ್ರಹವಾಗಿ 'ಸಾರನಾಥ'.

—ಎಂಬುದು ಹಿಂದಿನ ಪುಟದಲ್ಲಿರುವ ಚಿತ್ರಲಿಪಿಯ ಅರ್ಥ.

ಇದು ಒಂದು ಪ್ರಾಚೀನ ಶಿಲ್ಪದಿಂದ ಪ್ರತಿಮಾಡಿಕೊಂಡದ್ದು.

# ಸಾರನಾಥ

## ೧

‘ಸಾರನಾಥ’ ಎಂಬುದು ‘ಸಾರಂಗನಾಥ’ ಎಂಬ ಹೆಸರಿನ ಸಣ್ಣದಾದ ರೂಪವೆಂದು ಹೇಳುತ್ತಾರೆ.

ಭಗವಂತನಾದ ಗೌತಮ ಬುದ್ಧನು ತನ್ನ ಹಿಂದಿನ ಜನ್ಮಗಳಲ್ಲಿ ಒಂದು ಸಲ ಜಿಂಕೆಯಾಗಿ ಹುಟ್ಟಿದ್ದನಂತೆ. ಕಾಶೀನಗರದ ಬಳಿಯ ಕಾಡಿನಲ್ಲಿ ಸಾವಿರಾರು ಜಿಂಕೆಗಳ ಹಿಂಡಿಗೆ ರಾಜನಾಗಿದ್ದನಂತೆ.

ಅದೇ ಕಾಲದಲ್ಲಿ ಕಾಶೀನಗರದ ರಾಜನು, ಗೊತ್ತುಗುರಿಯಿಲ್ಲದೆ ತಾನು ಜಿಂಕೆಗಳನ್ನು ಬೇಟೆಯಾಡಿ ಕೊಲ್ಲುವ ಬದಲು, ದಿನಕ್ಕೆ ಒಂದು ಜಿಂಕೆ ತಾನಾಗಿಯೇ ಬಂದು ತನ್ನ ಜೀವವನ್ನು ಒಪ್ಪಿಸಿದರೆ ಮೇಲೆಂದು ಆ ಜಿಂಕೆಗಳ ರಾಜನೊಡನೆ ಒಪ್ಪಂದಮಾಡಿಕೊಂಡನು. ಅದರಂತೆ ಪ್ರತಿಯೊಂದು ದಿನವೂ ಒಂದೊಂದು ಜಿಂಕೆ ತಾನಾಗಿಯೇ ತನ್ನ ಸರದಿಯ ಪ್ರಕಾರ ಬಂದು ರಾಜನ ಬಾಣಕ್ಕೆ ತುತ್ತಾಗುತ್ತಿತ್ತು.

ಹೀಗೇ ಕೆಲವು ಕಾಲ ಕಳೆದ ಮೇಲೆ, ಒಂದು ದಿನ ಒಂದು ಗರ್ಭಿಣಿಯಾದ ಜಿಂಕೆಯ ಸರದಿ ಬಂತು. ತಾನು ಸಾಯುವುದಲ್ಲದೆ ತನ್ನ ಗರ್ಭದಲ್ಲಿರುವುದು ಕೂಡ ನಷ್ಟವಾಗುವುದಲ್ಲಾ ಎಂದು ದುಃಖಪಡುತ್ತಾ ಆ ಗರ್ಭಿಣಿ “ನನ್ನ ಸರದಿಗೆ ನೀವಾರಾದರೂ ಬನ್ನಿ. ನಾನು ಪ್ರಸವಿಸಿದ ಮೇಲೆ ನಮ್ಮದು ಎರಡು ಸರದಿಯಾಗುತ್ತದೆ” ಎಂದು ಎಷ್ಟೋ ಬೇಡಿಕೊಂಡರೂ ಯಾವ ಜಿಂಕೆಯೂ ಅದರ ಮೊರೆಯನ್ನು ಮನ್ನಿಸಲಿಲ್ಲ.

ಆಗ ಆ ಕಾಲದಲ್ಲಿ ಜಿಂಕೆಗಳ ರಾಜನಾಗಿ ಜನ್ಮತಾಳಿದ್ದ ಬೋಧಿಸತ್ತ್ವನು ಆ ಗರ್ಭಿಣಿಗೆ ಅಭಯದಾನ ಮಾಡಿ, ಅದರ ಬದಲಾಗಿ ಆ ದಿನದ ಸರದಿಗೆ ತಾನೇ ತನ್ನ ಜೀವ ಕೊಡುವೆನೆಂದು ರಾಜನಲ್ಲಿಗೆ ಹೋಯಿತು.

ರಾಜನು ಆ ಜಿಂಕೆಯ ಅದ್ಭುತವಾದ ತ್ಯಾಗದ ಪ್ರಭಾವಕ್ಕೆ ಒಳಗಾಗಿ, ಅದನ್ನು ಕೊಲ್ಲಲು ಮನಸ್ಸು ಬರದೆ, ಅದಕ್ಕೆ ತಾನು ಜೀವದಾನ ಮಾಡಿದನು. ಅದೇ ಕಾಲದಲ್ಲಿಯೇ ಆ ಜಿಂಕೆ ಹೇಳಿದ ಧರ್ಮಕಥೆಯನ್ನು ಕೇಳಿ, ಪ್ರಾಣಿಗಳಿಗೆ ಹಿಂಸೆಮಾಡು

ವುದು ಎಂತಹ ಪಾಪಕೃತ್ಯವೆಂಬುದನ್ನು ರಾಜನು ಮನಗಂಡು, 'ಇನ್ನು ಮುಂದೆ ನಾನು ನೀರಿನ ಮೀನುಗಳನ್ನಾಗಲಿ ನೆಲದ ಮೃಗಗಳನ್ನಾಗಲಿ ಆಕಾಶದ ಪಕ್ಷಿಗಳನ್ನಾಗಲಿ ಕೊಲ್ಲುವುದಿಲ್ಲ' ಎಂದು ಸರ್ವಜೀವಿಗಳಿಗೂ ಪ್ರಾಣದಾನವನ್ನು ಮಾಡಿದನು.

ಆ ದಿನ ಮೊದಲುಗೊಂಡು ಆ ಕಾಶೀನಗರದ ಬಳಿಯ ಅರಣ್ಯದಲ್ಲಿದ್ದ ಜಿಂಕೆಗಳೆಲ್ಲವೂ ನಿರ್ಭೀತಿಯಿಂದ ಸುಖವಾಗಿದ್ದುವು. ಈ ಸುಖಕ್ಕೆ ಕಾರಣವಾದ ಆ ಜಿಂಕೆಗಳ ರಾಜನಿಗೆ ಅಂದಿನಿಂದ **ಸಾರಂಗಗಳಿಗೆ ನಾಥ,** ಎಂದರೆ ಜಿಂಕೆಗಳಿಗೆ ಒಡೆಯ, ಎಂದೇ ಹೆಸರಾಗಿ, ಆ ಮಹಾದ್ಭುತ ನಡೆದ ಪ್ರದೇಶಕ್ಕೆ ಕೂಡ 'ಸಾರಂಗನಾಥ' ಎಂದು ಹೆಸರಾಯಿತು. ಅದೇ ಈಗಿನ "ಸಾರನಾಥ."

—ಎಂದು ಬೌದ್ಧರು ಈ ಸ್ಥಳದ ಐತಿಹ್ಯವನ್ನು ವರ್ಣಿಸುತ್ತಾರೆ.

ಈ ಕಾರಣದಿಂದ, 'ಸಾರನಾಥ' ಶಬ್ದ ಕಿವಿಗೆ ತಾಗಿದೊಡನೆ, ಆರ್ತತ್ರಾಣಪರಾಯಣರಾದ ಮಹಾಸತ್ತ್ವಗಳ ಮಹಾಚರ್ಯೆ ನೆನಪಿಗೆ ಬಂದು, ಮನಸ್ಸು ತೊಳೆದು ನಿರ್ಮಲವಾಗುತ್ತದೆ.

೨

ಈಗ 'ಸಾರನಾಥ'ವೆಂದು ಪ್ರಸಿದ್ಧವಾಗಿರುವ ಈ ಸ್ಥಳಕ್ಕೆ ಬಹು ಹಿಂದಿನ ಕಾಲದಲ್ಲಿ '**ಋಷಿಪತನ**' ಎಂಬ ಹೆಸರಿತ್ತೆಂದೂ ಅದರ ಬಳಿಯಲ್ಲಿಯೇ ಜಿಂಕೆಗಳು ನಿರ್ಭಯವಾಗಿ ವಾಸಮಾಡುತ್ತಿದ್ದ '**ಮೃಗದಾವ**'ವೆಂಬ ಕಾಡು ಇತ್ತೆಂದೂ ಬೌದ್ಧ ಗ್ರಂಥಗಳಿಂದ ತಿಳಿದುಬರುತ್ತದೆ. ಈ ಸ್ಥಳದಲ್ಲಿ ಐದುನೂರು ಪ್ರತ್ಯೇಕಬುದ್ಧರು ನಿರ್ವಾಣ ಪಡೆದಾಗ ಅವರ ದೇಹಗಳು ಕೆಳಗೆ ಬಿದ್ದುದರಿಂದ ಅಲ್ಲಿಗೆ 'ಋಷಿಪತನ'ವೆಂಬ ಹೆಸರು ಬಂದಿತೆಂದು ಕೆಲವರೂ, ಹಿಮಾಲಯದ ಕಡೆಯಿಂದ ಆಕಾಶಮಾರ್ಗವಾಗಿ ಹಾರಿಬರುತ್ತಿದ್ದ ಋಷಿಗಳು ಇಲ್ಲಿ ಇಳಿದು, ಇಲ್ಲಿಂದ ಹಾರಿಹೋಗುತ್ತಿದ್ದುದರಿಂದ ಇದಕ್ಕೆ ಆ ಹೆಸರು ಬಂದಿತೆಂದು ಇನ್ನು ಕೆಲವರೂ ಹೇಳುತ್ತಾರೆ. ಅದು ಹೇಗೇ ಇರಲಿ, ಈ ಋಷಿಪತನಕ್ಕೂ ಅದರ ಬಳಿಯ ಮೃಗದಾವಕ್ಕೂ ಪ್ರಾಮುಖ್ಯತೆ ಬಂದದ್ದು ಗೌತಮ ಬುದ್ಧನಿಂದ ಈಚೆಗೆ.

ರಾಜಕುಮಾರನಾದ ಸಿದ್ಧಾರ್ಥನು ತನ್ನ ಸರ್ವಭೋಗಗಳನ್ನೂ ತ್ಯಜಿಸಿ, ಆರು ವರುಷ ಕಾಲ ತಪಸ್ಸು ಮಾಡಿ, ಗಯಾ ಕ್ಷೇತ್ರದಲ್ಲಿ ಅನುಪಮವಾದ ಬೋಧಿಯನ್ನು

ಪಡೆದುಕೊಂಡ ಮೇಲೆ, ತಾನು ಕಂಡ ಧರ್ಮವನ್ನು ಮೊತ್ತಮೊದಲನೆಯ ಬಾರಿ ಲೋಕಕ್ಕೆ ತಿಳಿಯಪಡಿಸಿದ್ದು ಈ ಋಷಿಪತನದ ಮೃಗದಾವದಲ್ಲಿಯೇ.

ಈ ಋಷಿಪತನದ ಮೃಗದಾವವಿರುವುದು ವಾರಾಣಸಿಯೆಂದು ಪ್ರಸಿದ್ಧವಾದ ಕಾಶೀಕ್ಷೇತ್ರದಿಂದ ಮೂರು ನಾಲ್ಕು ಮೈಲು ಉತ್ತರಕ್ಕೆ. ಸರ್ವಮಲಾಪಹಾರಿಣಿಯಾಗಿ ದಿವಿಜನದಿಯೆನಿಸಿದ ಗಂಗೆಯ ದಡದಲ್ಲಿರುವ ಕಾಶಿ ಶ್ರೀ ವಿಶ್ವೇಶ್ವರನ ಸನ್ನಿಧಿಯಿಂದ ವೈದಿಕರಿಗೆ ಪವಿತ್ರವಾದ ಕ್ಷೇತ್ರ. ಬಹಳ ಹಿಂದಿನ ಕಾಲದಿಂದಲೂ ಅಧ್ಯಾತ್ಮ ವಿದ್ಯೆಯ ಸರಸ್ವತೀಪೀಠವೆಂದು ಪ್ರಖ್ಯಾತವಾದದ್ದು. ಇಂತಹ ಕಾಶಿಗೆ ಸಮೀಪವಾದ ಈ ಋಷಿಪತನದ ಮೃಗದಾವದಲ್ಲಿ ಬುದ್ಧನು ತನ್ನ ಪ್ರಥಮ 'ಧರ್ಮಚಕ್ರ ಪ್ರವರ್ತನ'ವನ್ನು ನಡೆಸಿದನೆಂಬ ಕಾರಣದಿಂದ ಬೌದ್ಧರಿಗೆ ಋಷಿಪತನ ಪರಮಪವಿತ್ರವಾದ ಕ್ಷೇತ್ರ.

ಇದೇ ಮೃಗದಾವದ ನೈಋತ್ಯಕ್ಕೆ ಒಂದು ಮೈಲಿಯ ದೂರದಲ್ಲಿರುವ ಸಿಂಹಪುರಿಯೆಂಬ ಗ್ರಾಮದಲ್ಲಿ ಜೈನರ ಹನ್ನೊಂದನೆಯ ತೀರ್ಥಂಕರನಾದ ಶ್ರೇಯಾಂಸನಾಥನು ತಪಸ್ಸು ಮಾಡಿ ಅರ್ಹತ್ವವನ್ನು ಪಡೆದನೆಂದು ಆ ಸ್ಥಳವು ಜೈನರಿಗೆ ಯಾತ್ರಾಸ್ಥಳವಾಗಿದೆ.

ಈ ಪ್ರಕಾರವಾಗಿ ವೈದಿಕರಿಗೂ ಬೌದ್ಧರಿಗೂ ಜೈನರಿಗೂ ಪುಣ್ಯಭೂಮಿಯೆನ್ನಿಸಿದ ಈ ಸಾರನಾಥಪ್ರದೇಶಕ್ಕೆ ಮೊಗಲದೊರೆಗಳಲ್ಲಿ ಪುಣ್ಯಶ್ಲೋಕನಾದ ಅಕಬರನ ತಂದೆಯಾದ ಹುಮಾಯುನ್ ಬಂದು, ಒಂದು ದಿನ ಅಲ್ಲಿ ತಂಗಿದ್ದನಂತೆ. ಅದರ ಸ್ಮಾರಕವಾಗಿ ಅಕ್ಬರ್ ಅಲ್ಲಿನ 'ಚೌಖಂಡಿ'ಯೆಂಬ ಮಣ್ಣುದಿಣ್ಣೆಯ ಮೇಲೆ ಎಂಟು ಮೂಲೆಯ ಒಂದು ಕಟ್ಟಡವನ್ನು ಕಟ್ಟಿಸಿ, ತನ್ನ ತಂದೆ ಬಂದುದರ ಬಗ್ಗೆ ಅಲ್ಲೊಂದು ಶಾಸನವನ್ನು ಬರೆಸಿದ್ದಾನೆ.

ಹುಮಾಯುನ್ ಆದರೂ ಈ ಸಾರನಾಥಕ್ಕೆ ಏಕೆ ಬಂದಿದ್ದನೊ? ಒಂದು ದಿನ ಅಲ್ಲಿ ತಂಗಿದ್ದಾಗ, ಆ ವೇಳೆಗಾಗಲೇ ಹಾಳುಹಾಳಾಗಿದ್ದ ಆ ಕ್ಷೇತ್ರವನ್ನು ಕಂಡು ಅವನಿಗೆ ಏನೆನ್ನಿಸಿತೊ? ಯಾರು ಬಲ್ಲರು?

—ಈ ರೀತಿಯಾಗಿ ಬೇರೆ ಬೇರೆ ಮತಗಳವರಿಗೂ—ಕಾರಣ ಬೇರೆ ಬೇರೆಯಾದರೂ—ಮಾನ್ಯವೆನ್ನಿಸಿದ ಸಾರನಾಥಕ್ಷೇತ್ರದ ಸಂಪರ್ಕವುಳ್ಳ ಅಶೋಕಚಕ್ರವನ್ನು ಕಣ್ಣೆದುರಿಗಿರಿಸಿಕೊಂಡ ಸ್ವತಂತ್ರಭಾರತ 'ಎಲ್ಲ ಮತಗಳವರನ್ನೂ ಒಂದೇ ಸಮನಾಗಿ ನಡೆಸಿಕೊಳ್ಳುವೆ'ನೆಂಬ ತನ್ನ ಹಿರಿಯ ಆದರ್ಶವನ್ನು ಮರೆಯುವುದು ಸಾಧ್ಯವಿಲ್ಲ.

೩

ಸಾರನಾಥದ ನಾಮಸಂಪರ್ಕವುಳ್ಳ ಅಶೋಕಚಕ್ರವನ್ನೇ ಧ್ವಜಚಿಹ್ನೆಯಾಗಿ ಎತ್ತಿಕೊಂಡಿರುವುದರಲ್ಲಿ ಇನ್ನೂ ಒಂದು ಹೆಚ್ಚಿನ ಅರ್ಥಸ್ವಾರಸ್ಯವಿದೆ.

ಬುದ್ಧನು ಪರಿನಿರ್ವಾಣ ಪಡೆದ ಮೂರು ಶತಮಾನಗಳ ಅನಂತರ ಮೈದೋರಿದ ಧರ್ಮರಾಜನಾದ ಅಶೋಕನು ಇತರ ಬೌದ್ಧಕ್ಷೇತ್ರಗಳ ಜೊತೆಗೆ ಈ ಸಾರನಾಥವನ್ನೂ ಸಂದರ್ಶಿಸಿ, ಅಲ್ಲಿಗೆ ತಾನು ಬಂದಿದ್ದ ಗುರುತಿಗಾಗಿ ಒಂದು ದೊಡ್ಡ ಶಿಲಾಸ್ತಂಭವನ್ನು ನೆಡಿಸಿ, ಅದರ ತುದಿಯನ್ನು ನಾಲ್ಕು ಮಹಾಸಿಂಹಗಳ ಭವ್ಯಸಂಯೋಗದಿಂದ ಶೃಂಗರಿಸಿ, ಆ ಸ್ತಂಭದ ಮೇಲೆ ಒಂದು ಶಾಸನವನ್ನು ಕೆತ್ತಿಸಿದನು.

ಒಂದೇ ಕೂಟವಾಗಿ ಬಾಳಬೇಕಾದ ಸಂಘದಲ್ಲಿ ಒಡಕನ್ನು ಉಂಟುಮಾಡಲು ಯಾವನಾದರೂ ಯತ್ನಿಸುವುದಾದರೆ, ಅಂತಹವನನ್ನು ಸಂಘದಿಂದ ಹೊರಗೆ ದೂಡಬೇಕು—ಎಂಬುದು ಆ ಶಾಸನದ ಸಾರಾಂಶ.

ಈ ಶಾಸನವನ್ನು ಧರಿಸಿದ ಶಿಲಾಸ್ತಂಭದ ತುದಿಯ ಶಿಲಾಸಿಂಹಗಳ ಕಾಲಿನಡಿಯಲ್ಲಿರುವ ಚಕ್ರವನ್ನೇ ನಾವು 'ಅಶೋಕಚಕ್ರ'ವೆಂದು ವ್ಯವಹರಿಸಿ ನಮ್ಮ ಸ್ವತಂತ್ರ ಭಾರತದ ತ್ರಿವರ್ಣಧ್ವಜದ ಹೃದಯದಲ್ಲಿ ಇರಿಸಿಕೊಂಡಿರುವುದು.

ಭಾರತದ ಸಂಘಭೇದನೆಗೆ ಸನ್ನಾಹ ನಡೆಯುವ ಈ ಸಂದರ್ಭದಲ್ಲಿ ಈ ಶಾಸನವನ್ನು ನೆನಪುಕೊಡುವ ಚಕ್ರದ ಚಿಹ್ನೆ ಎಷ್ಟು ಅಗತ್ಯ, ಎಷ್ಟು ಉಚಿತ ಎಂಬುದನ್ನು ವಿವರಿಸಬೇಕಾಗಿಲ್ಲ.

## ಸಾರನಾಥದ ಸಿಂಹಶೀರ್ಷ

ಅದರ ನಡುವಿನ ಶಿಲಾಪೀಠ

ಆದರೊಳಗಿನ ಚಕ್ರ



ಸಾರನಾಥದಲ್ಲಿ ಅಶೋಕನು ಎತ್ತಿಸಿದ ಕಲ್ಲು ಕಂಬದ ತುದಿಯ ಅಲಂಕಾರ ಭಾಗವನ್ನು, ಸಾಮಾನ್ಯವಾಗಿ 'ಸಿಂಹಶೀರ್ಷ'ವೆಂದು ವ್ಯವಹರಿಸುವ ಆ ಅಗ್ರಭಾಗವನ್ನು, ಹಿಂದಿನ ಪುಟದಲ್ಲಿ ಪ್ರತಿಮಾಡಿ ಚಿತ್ರಿಸಿದೆ.

ಈ ಸಿಂಹಶೀರ್ಷದ ಶಿಖರದಲ್ಲಿ ಹಿಂದೆ ಇದ್ದ, ಈಗ ಒಡೆದುಹೋಗಿ ನಷ್ಟವಾಗಿರುವ, ಮೂವತ್ತೆರಡು ಅರಗಳ ಮಹಾಚಕ್ರ ಹೇಗಿತ್ತೆಂಬುದನ್ನು ಪುಟ ೫೩ರಲ್ಲಿ ಕಾಣಬಹುದು.

# ಸಾರನಾಥದ ಸಿಂಹಶೀರ್ಷ

## ೧

ರಾಜಾ ಅಶೋಕನು ತಾನು ತೀರ್ಥಯಾತ್ರೆ ಹೊರಟಾಗ ಬುದ್ಧನ ಪ್ರಥಮ ಧರ್ಮಚಕ್ರಪ್ರವರ್ತನಕ್ಕೆ ಭೂಮಿಯೆನ್ನಿಸಿದ ಸಾರನಾಥ ಕ್ಷೇತ್ರವನ್ನೂ ಸಂದರ್ಶಿಸಿ, ಅಲ್ಲಿ ಒಂದು ಸ್ಮಾರಕಸ್ತಂಭವನ್ನು ಸ್ಥಾಪಿಸಿದನು. ಇದಕ್ಕೋಸ್ಕರವಾಗಿಯೇ ಕಾಶಿಗೆ ದಕ್ಷಿಣದಲ್ಲಿ ಇಪ್ಪತ್ತು ಮೈಲು ದೂರದಲ್ಲಿರುವ ಚುನಾರ್ ಪರ್ವತಗಳಿಂದ ಕಲ್ಲಿನ ಕಂಬವನ್ನು ಕಡೆಯಿಸಿ, ಸಾರನಾಥಕ್ಕೆ ತರಿಸಿ ನೆಡಿಸಿದನು. ಆ ಕಂಬದ ಮೇಲು ತುದಿಯನ್ನು—ನಾವು ಈಗ " ಸಿಂಹಶೀರ್ಷ " ವೆಂದು ಕರೆಯುವ—ಸುಂದರವಾದ ಅಗ್ರದಿಂದ ಅಲಂಕಾರಗೊಳಿಸಿದನು.

ಅನಂತರ ಆರೇಳು ಶತಮಾನಗಳು ಕಳೆದ ಮೇಲೆ ಇಲ್ಲಿಗೆ ಚೀನಾದೇಶದಿಂದ ಬಂದ ಫಾಹಿಯಾನ್, ಆ ಬಳಿಕ ಮೂರು ಶತಮಾನವಾದ ಮೇಲೆ ಅದೇ ಚೀನಾದಿಂದ ಬಂದ ಹುಯೆನ್‌ತ್ಸಾಂಗ್ ಮತ್ತು ಇತ್ಸಿಂಗ್—ಇವರು ಸಾರನಾಥದ ಆ ಅದ್ಭುತ ವಾದ ಸ್ಮಾರಕಸ್ತಂಭವನ್ನು ಕಂಡು ವಿಸ್ಮಿತರಾದರು.

ಆದರೆ ಮತ್ತೆ ನಾಲ್ಕೈದು ಶತಮಾನಗಳಾದ ಮೇಲೆ ಬಂದವರು, ಆ ಘುಜನಿ ಘೋರಿಗಳ ನೇತೃತ್ವದಲ್ಲಿ ಬಂದ ಆ ಪರಮತದ್ವೇಷಕರು, ಆ ವಿಗ್ರಹಭೇದಕರು, ಸಾರನಾಥದಲ್ಲಿದ್ದ ಅನೇಕ ಚೈತ್ಯ ವಿಹಾರ ದೇವಾಗಾರಗಳನ್ನು ನೆಲಸಮಮಾಡಿದ್ದರ ಜೊತೆಗೆ, ಅಶೋಕನ ಸ್ಮಾರಕಸ್ತಂಭವನ್ನೂ ಮುರಿದಿಕ್ಕಿ ಹೋದರು.

ಅನಂತರ ಬಹುಕಾಲದವರೆಗೆ ಸಾರನಾಥ ಪಾಳುಬಿದ್ದಿತ್ತು. ಹದಿನೆಂಟನೆಯ ಶತಮಾನದ ಅಂತ್ಯದಲ್ಲಿ ಸಾರನಾಥದ ಭಾಗ್ಯನೇಮಿ ಪುನಃ ಮೇಲೆದ್ದಿತು. ಪುರಾವಸ್ತು ಸಂಶೋಧಕರ ಆಸಕ್ತಿಯಿಂದಲೂ ಉದ್ಯೋಗದಿಂದಲೂ ಸಾರನಾಥದ ಹಿರಿಮೆ ಮತ್ತೊಮ್ಮೆ ಬೆಳಗತೊಡಗಿತು.

ಈಗನಕ, ಸ್ವತಂತ್ರಭಾರತವು ಸಾಧನೆಯಾದ ಮೇಲೆ, ಸಾರನಾಥವು ಅಲ್ಲಿನ ಚಕ್ರದ ಮಹಿಮೆಯಿಂದ, ತಾನು ಭಾರತದಲ್ಲೆಲ್ಲ, ರಾಷ್ಟ್ರಧ್ವಜದ ನಿಮಿತ್ತದಿಂದ, ವ್ಯಾಪಿಸಿಕೊಂಡಿದೆ.

ನಿಜವೇ, ಕಾಳಿದಾಸ ಹೇಳಿದ ಮಾತು: 'ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರ ನೇಮಿಕ್ರಮೇಣ!' ಚಕ್ರದ ನೇಮಿ ಒಮ್ಮೆ ಕೆಳಗೆ ಬರುವಂತೆ, ಮತ್ತೆ ಮೇಲೆ ಏರುವಂತೆ—ಜನಗಳ, ದೇಶಗಳ ಭಾಗ್ಯವಾದರೂ ಹಾಗೆಯೇ!

೨

ಅಶೋಕನು ಸ್ಥಾಪಿಸಿದ ಈ ಕಲ್ಲುಕಂಬದ ಎತ್ತರ ಎಷ್ಟಿತ್ತೆಂದು ನಮಗೆ ಸರಿಯಾಗಿ ಗೊತ್ತಿಲ್ಲವಾದರೂ, ಈಗ ದೊರಕಿರುವ ಕಂಬದ ಮುರುಕುಗಳಿಂದ ಅದು ಸುಮಾರು ೩೮|| ಅಡಿ ಎತ್ತರವಿದ್ದಿರಬೇಕೆಂದು ಬಲ್ಲವರು ಊಹಿಸಿದ್ದಾರೆ. ಒಂದೇ ಒಂದು ಏಕಘನವಾದ ಈ ಕಂಬದ ಮೇಲುಗಡೆ ಇದ್ದ ಸಿಂಹಶೀರ್ಷವೆಂಬ ಅಲಂಕಾರ ಭಾಗವು, ಕಂಬವು ಮುರಿದಾಗ ಕೆಳಗೆ ಬಿದ್ದು ಸ್ವಲ್ಪ ಹಾನಿ ಪಡೆದರೂ, ಯಾರ ಭಾಗ್ಯವೋ ಏನೋ, ತೀರ ಭಿನ್ನವಾಗದೆ, ಬಹುಮಟ್ಟಿಗೆ ತನ್ನ ಪೂರ್ವಸೌಂದರ್ಯವನ್ನು ಉಳಿಸಿಕೊಂಡು ಉಳಿದಿದೆ. ಈಗ ಈ ಸಿಂಹಶೀರ್ಷವನ್ನು ಸಾರನಾಥದ ವಸ್ತುಸಂಗ್ರಹಾಲಯದಲ್ಲಿ ರಕ್ಷಿಸಿಟ್ಟಿದ್ದಾರೆ.

ಈ ಸಿಂಹಶೀರ್ಷದ ಎತ್ತರ ೭ ಅಡಿ. ಪುಟ ೩೭ರಲ್ಲಿ ಇದರ ಸ್ವರೂಪವನ್ನು ತೋರಿಸಿದೆ.

ಇದು ಕೂಡ ಒಂದೇ ಶಿಲೆಯಿಂದ ನಿರ್ಮಾಣವಾದುದಾದರೂ ಇದರ ರಚನೆಯಲ್ಲಿ ಮೇಲಿನಿಂದ ಕೆಳಕ್ಕೆ ಮೂರು ಅಂಗಗಳಿರುವುದು ಗೋಚರವಾಗುತ್ತದೆ.

ಕೆಳಗಡೆ ಮೂಲದಲ್ಲಿ ಗಂಟೆಯ ಆಕಾರದ ಒಂದು ಕಮಲಪುಷ್ಪ. ಅರಳಿದ ಆ ಹೂವಿನ ಹದಿನಾರು ದಳಗಳನ್ನೂ ಪೂರ್ಣವಾಗಿ ಬಿರಿಯಿಸಿ ಕೆಳಕ್ಕೆ ಒತ್ತಿಹಿಡಿದ ಹಾಗಿದೆ. ಇದರ ಎತ್ತರ ೨ ಅಡಿ.

ಈ ಗಂಟೆಯ ಆಕಾರದ ಕಮಲಪುಷ್ಪದ ಮೇಲೆ, ಮಧ್ಯೆ ಕರ್ಣಿಕೆಯಿರುವಲ್ಲಿ, ಚಕ್ರಾಕಾರದ ಒಂದು ಪೀಠವಿದೆ. ಈ ಪೀಠದ ಎತ್ತರ ೧ ಅಡಿ ೧|| ಅಂಗುಲ. ಈ ಚಕ್ರಾಕಾರಪೀಠದ ಅಡ್ಡಳತೆ ೨ ಅಡಿ ೧೦ ಅಂಗುಲ. ಈ ಪೀಠದ ಅಂಚಿನ ಸುತ್ತಲೂ ಕೆತ್ತಿರುವ ಅಲಂಕಾರದಲ್ಲಿ ನಾಲ್ಕು ದಿಕ್ಕಿಗೆ ಮುಖ ಮಾಡಿಕೊಂಡು ನಾಲ್ಕು ಚಕ್ರಗಳೂ, ಪ್ರತಿ ಎರಡು ಚಕ್ರಗಳ ನಡುವೆ ಒಂದೊಂದು ಮೃಗದಂತೆ ಆನೆ, ಎತ್ತು, ಕುದುರೆ, ಸಿಂಹ ಎಂಬ ನಾಲ್ಕು ಮೃಗಗಳೂ ಇವೆ. ಈ ಮೃಗಗಳಲ್ಲಿ

ಕುದುರೆಯನ್ನು ಓಡುತ್ತಿರುವ ಹಾಗೆಯೂ ಮಿಕ್ಕ ಮೂರನ್ನು ನಿಂತಿರುವ ಹಾಗೆಯೂ ಕೆತ್ತಿ ತೋರಿಸಿದ್ದಾರೆ.

ಈ ಪೀಠದ ಮೇಲುಭಾಗದಲ್ಲಿ, ಒಂದೊಂದು ಚಕ್ರದ ಮೇಲೂ ಒಂದೊಂದು ಸಿಂಹದಂತೆ, ನಾಲ್ಕು ದಿಕ್ಕುಗಳಿಗೂ ಮುಖಮಾಡಿ ಬಾಯಿ ತೆರೆದಿರುವ ನಾಲ್ಕು ಮಹಾಸಿಂಹಗಳು, ಬೆನ್ನಿಗೆ ಬೆನ್ನು ಕೊಟ್ಟು, ೩ ಅಡಿ ೯ ಅಂಗುಲ ಎತ್ತರವಾಗಿ ಎದ್ದು ನಿಂತಿವೆ.

ಇದು ಈಗ ನಮಗೆ ದೊರಕಿರುವ ಸಾರನಾಥ ಅಶೋಕಶಿಲಾಸ್ತಂಭದ ಅಗ್ರದಲ್ಲಿದ್ದ ಸಿಂಹಶೀರ್ಷ. ಇದಲ್ಲದೆ, ದೊರಕಿರುವ ಇನ್ನೂ ಕೆಲವು ಅವಶೇಷಗಳ ಆಧಾರದ ಮೇಲೆ, ಈ ಏಳು ಅಡಿಯ ಸಿಂಹಶೀರ್ಷಕ್ಕೆ ಶಿಖರವಾಗಿ ಒಂದು ಮಹಾ ಶಿಲಾಚಕ್ರವಿತ್ತೆಂದೂ, ಅದನ್ನು ನಾಲ್ಕು ಸಿಂಹಗಳ ನಡುವೆ ನೇರವಾಗಿ ನಿಲ್ಲಿಸಿದ್ದರೆಂದೂ, ಅದಕ್ಕೆ ೩೨ ಅರಗಳಿದ್ದುವೆಂದೂ, ಅದರ ಅಡ್ಡಳತೆ ೨ ಅಡಿ ೯ ಅಂಗುಲವೆಂದೂ ವಿದ್ವಾಂಸರು ತಿಳಿಸುತ್ತಾರೆ.

ನೆಲದ ಮಟ್ಟದಿಂದ ೨೭॥ ಅಡಿ ಎತ್ತರ ನಿಂತ ಕನ್ನಡಿನುಣುಪಿನ ಕಲ್ಲುಕಂಬ, ಅದರ ಮೇಲೆ ೭ ಅಡಿ ಎತ್ತರದ ಶಿಲಾಸಿಂಹಶೀರ್ಷ, ಮತ್ತೆ ಅದರ ಮೇಲೆ ೨ ಅಡಿ ೯ ಅಂಗುಲ ಎದ್ದುನಿಂತ ೩೨ ಅರಗಳ ಮಹಾಚಕ್ರ! ಇದು ಇಷ್ಟೇ ಭವ್ಯತೆ ಸಾಲದು ಎಂದೋ ಏನೋ, ಶೀರ್ಷದಲ್ಲಿನ ನಾಲ್ಕು ಸಿಂಹಗಳ ಕಣ್ಣುಗಳನ್ನೂ ಪೀಠದಲ್ಲಿನ ನಾಲ್ಕು ಚಕ್ರಗಳ ನಾಭಿಗಳನ್ನೂ ಆ ಕಾಲದಲ್ಲಿ ಉಚಿತವಾದ ವರ್ಣರತ್ನಗಳಿಂದ ಅಲಂಕರಿಸುತ್ತಿದ್ದರೆಂಬುದಕ್ಕೂ ಆಧಾರಗಳು ದೊರಕಿವೆ.

ಇಂತಹ ಈ ಸಿಂಹಶೀರ್ಷದಲ್ಲಿ, ನಾಲ್ಕು ಸಿಂಹಗಳೂ ಸ್ಥಿರವಾಗಿ ನಿಲ್ಲುವುದಕ್ಕೆ ಆಧಾರವೋ ಎಂಬಂತಿರುವ ನಾಲ್ಕು ಚಕ್ರಗಳನ್ನು ಒಳಕೊಂಡಿರುವ ಶಿಲಾಪೀಠದಿಂದ ಒಂದು ಚಕ್ರವನ್ನು ಎತ್ತಿಕೊಂಡು, ಅದನ್ನೇ '**ಅಶೋಕಚಕ್ರ**'ವೆಂದು ವ್ಯವಹರಿಸಿ, ನಮ್ಮ ಸ್ವತಂತ್ರಭಾರತದ ರಾಷ್ಟ್ರಧ್ವಜದಲ್ಲಿ ಸಂಸ್ಥಾಪಿಸಿಕೊಂಡಿದ್ದೇವೆ. ಈ ಚಕ್ರಕ್ಕೆ ೨೪ ಅರಗಳು—ಎಂಬುದು ಇದರ ಒಂದು ವಿಶೇಷ ಲಕ್ಷಣ.

೩

ಅಶೋಕನಿಗಿಂತ ಹಿಂದಿನಿಂದಲೂ, ಭಗವಂತನಾದ ಬುದ್ಧನಿಗಿಂತ ಹಿಂದಿನಿಂದಲೂ ಈ ದೇಶದಲ್ಲಿ ಬಳಕೆಯಾಗಿದ್ದ ಆನೆ, ಗೂಳಿ, ಕುದುರೆ, ಸಿಂಹ ಎಂಬ ನಾಲ್ಕು ಪ್ರಾಣಿಗಳನ್ನೂ ಚಕ್ರ, ಕಮಲ ಎಂಬ ಎರಡು ವಸ್ತುಗಳನ್ನೂ ಆಯ್ದು ಕೊಂಡು, ಈ ಆರೇ ಆರು ಚಿಹ್ನೆಗಳ ಜೋಡಣೆಯ ಮೂಲಕ ಇದರ ನಿರ್ಮಾಪಕರು ತಾವು ತಿಳಿಸಬೇಕೆಂದು ಉದ್ದೇಶಿಸಿದುದನ್ನು ಬಹು ಸ್ಪಷ್ಟವಾಗಿ, ಬಹು ಸುಂದರವಾಗಿ ತಿಳಿಸಿದ್ದಾರೆ.

ಈ ಚಿಹ್ನೆಗಳಿಗೆ ಬೌದ್ಧರು ನಿಸ್ಪೃಷ್ಟವಾದ ಅರ್ಥಗಳನ್ನು ಕೊಟ್ಟು ಅದನ್ನು ಪ್ರಚಾರಕ್ಕೆ ತಂದು ನಿಲ್ಲಿಸಿದರಾದರೂ, ಬೌದ್ಧರಲ್ಲದವರು ಕೂಡ ಈ ಚಿಹ್ನೆಗಳಿಗೆ ಬಹು ಸ್ವಾರಸ್ಯವಾದ ಅರ್ಥಗಳನ್ನು ಇರಿಸಿದ್ದಾರೆ.

ಚಕ್ರವು ಕುಲಾಲಚಕ್ರ, ರಥಚಕ್ರ, ಚಕ್ರಿಚಕ್ರ, ಕಾಲಚಕ್ರ, ಭಾಗ್ಯಚಕ್ರ, ಧರ್ಮಚಕ್ರ, ಯೋಗದ ಷಟ್ಚಕ್ರ ಇವುಗಳನ್ನು ಮನಸ್ಸಿಗೆ ತರುವ ಶಕ್ತಿಯುಳ್ಳದ್ದು.

ಕಮಲಪುಷ್ಪವು ಕೆಸರಿನಲ್ಲಿ ಹುಟ್ಟಿದರೂ, ಸದಾ ಬೆಳಕಿಗಾಗಿಯೇ ಹಾತೊರೆಯುತ್ತ, 'ತಮಸೋ ಮಾ ಜ್ಯೋತಿರ್ಗಮಯ' ಎಂಬುದನ್ನು ನಮಗೆ ನೆನಪು ಕೊಡುತ್ತ, ಬೆಳಕನ್ನು ಕಂಡೊಡನೆಯೆ ಪ್ರಫುಲ್ಲವಾಗಿ, ಆರಕ್ತವಾಗಿ, ಬೆಳಕು ಮರೆಯಾದರೆ ಸೊರಗಿಹೋಗುವ ಪುಷ್ಪ.

ಆನೆ, ಗೂಳಿ, ಕುದುರೆ, ಸಿಂಹ—ಇವು ನಾಲ್ಕೂ ಉತ್ತಮನಾದ ಪುರುಷನನ್ನು ವರ್ಣಿಸುವುದಕ್ಕೆ ಸಾಮಾನ್ಯವಾಗಿ ಬಳಸುವ ಉಪಮಾನಗಳು. ಉದಾಹರಣೆಗೆ ಗೀತೆಯಲ್ಲಿ ಅರ್ಜುನನನ್ನು 'ಭರತರ್ಷಭ' ಎಂದರೆ ಭರತಕುಲದಲ್ಲಿ ವೃಷಭದಂತೆ ಇರುವವನು ಎಂದು ಸಂಬೋಧಿಸುತ್ತಾರೆ. 'ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ' ಮುಂತಾದ ಸೂಕ್ತಿಗಳಲ್ಲಿ ಪುರುಷನನ್ನು ಸಿಂಹವೆಂದು ಕರೆಯುತ್ತಾರೆ. ಗಂಭೀರವಾದ ಗಮನಕ್ಕೆ ಗಜಗಮನ, ವೃಷಭಗಮನ, ಸಿಂಹಗಮನಗಳನ್ನು ಹೋಲಿಸುವುದೂ ವೇಗವಾದ ಗಮನಕ್ಕೆ ಅಶ್ವವನ್ನು ಉದಾಹರಣೆಯಾಗಿ ಕೊಡುವುದೂ ಈ ದೇಶದಲ್ಲಿ ಬಹಳ ಹಿಂದಿನಿಂದ ರೂಢಿ.

ಇದೂ ಅಲ್ಲದೆ, ಈ ಆರು ಚಿಹ್ನೆಗಳು ಪುರಾತನ ಕಾಲದಿಂದಲೂ ನಮ್ಮ ಹಿಂದೂ ದೇವತೆಗಳ ಸಂಬಂಧವಾಗಿ ಎಲ್ಲರಿಗೂ ಪರಿಚಿತವಾಗಿವೆ. ಚಕ್ರವು ವಿಷ್ಣುವಿನ

ಆಯುಧ ವಿಶೇಷ. ಕಮಲವು ವಿಷ್ಣುಪತ್ನಿಯಾದ ಲಕ್ಷ್ಮಿಯ ವಾಸಸ್ಥಾನ. ವೃಷಭವು ಪರಮೇಶ್ವರನ ವಾಹನ. ಸಿಂಹವು ಪಾರ್ವತಿಯ ವಾಹನ. ಆನೆಗಳಲ್ಲಿಯೂ ಕುದುರೆಗಳಲ್ಲಿಯೂ ಅತ್ಯುತ್ಕೃಷ್ಟವೆನಿಸಿದ ಐರಾವತವೂ ಉಚ್ಚೈಶ್ರವಸ್ಸೂ ಸಹಸ್ರಾಕ್ಷನಾದ ದೇವೇಂದ್ರನ ವಾಹನಗಳು.

ಹೀಗೆ, ಈ ಸಿಂಹಶೀರ್ಷವನ್ನು ರಚಿಸುವುದಕ್ಕಾಗಿ ಬಳಸಿಕೊಂಡಿರುವ ಚಿಹ್ನೆಗಳಿಂದ ಹಿಂದೂಮಾರ್ಗವನ್ನು ಬಲ್ಲ ಮನಸ್ಸಿಗೆ ಈ ರೀತಿಯಾದ ಭಾವಸಾಹಚರ್ಯಗಳು ಬರುವುದು ಸಹಜವಾದರೂ, ಈ ರಚನೆಯಲ್ಲಿ ಇರಬಹುದಾದ ಪರಸ್ಪರ ಸಂಬಂಧವೇನು ಎಂಬುದು ಅಷ್ಟು ಸ್ಪಷ್ಟವಾಗುವುದಿಲ್ಲ. ಆದರೆ ಈ ರಚನೆಯನ್ನು ಮಾಡಿಸಿದ ಅಶೋಕನು ಬುದ್ಧನ ಮಾರ್ಗದಲ್ಲಿ ನಡೆದವನಾದುದರಿಂದ, ಬೌದ್ಧರಲ್ಲಿ ಈ ಚಿಹ್ನೆಗಳಿಗೆ ಏನು ಅರ್ಥವಿದೆಯೋ ಅದನ್ನು ತಿಳಿದರೆ, ಈ ರಚನೆಯಲ್ಲಿರುವ ಚಿಹ್ನೆಗಳ ಪರಸ್ಪರ ಸಂಬಂಧ ಅರ್ಥವಾಗುತ್ತದೆ.

೪

ಈ ಆರು ಚಿಹ್ನೆಗಳಲ್ಲಿ ಚಕ್ರವು ಬುದ್ಧನ '**ಧರ್ಮಚಕ್ರ**'ವೆಂಬುದನ್ನು ಎಲ್ಲರೂ ಬಲ್ಲರು. ಅದರಂತೆಯೇ ಕಮಲವೂ. ಕೆಸರಿನಲ್ಲಿ ಹುಟ್ಟಿದರೂ ಕೆಸರಿನ ಗುಣಗಳನ್ನು ಕಟ್ಟಿಕೊಳ್ಳದೆ ಶುದ್ಧವಾಗಿ ಸುವಾಸನೆಯಿಂದ ಬೆಳೆದು ಬಾಳುವ ಹೂವು—ಈ ಕಮಲ.

ಉಳಿದ ನಾಲ್ಕು ಚಿಹ್ನೆಗಳ ಅರ್ಥ ಅಷ್ಟು ಪ್ರಚಾರದಲ್ಲಿಲ್ಲ.

ಬುದ್ಧನಾದ ಸಿದ್ಧಾರ್ಥಕುಮಾರನು ತಾನು ಈ ಲೋಕದಲ್ಲಿ ಜನ್ಮತಾಳುವ ಮೊದಲು, ಸ್ವರ್ಗದಿಂದ ತಾಯಿಯ ಗರ್ಭಕ್ಕೆ ಅವತರಿಸಿ ಬರುವಾಗ **ಬಿಳಿಯ ಆನೆಯ** ರೂಪದಲ್ಲಿ ಬಂದ ಹಾಗೆ ಅವನ ತಾಯಿ ಕನಸು ಕಂಡಳಂತೆ.

ಸಿದ್ಧಾರ್ಥನು ಲೋಕದ ದುಃಖಕ್ಕೆ ಮರುಗಿ, ವಿರಕ್ತನಾಗಿ, ಮನೆ ಬಿಟ್ಟು ಮಹಾಭಿನಿಷ್ಕ್ರಮಣವನ್ನು ಆಚರಿಸಿದಾಗ, ಕಂಥಕನೆಂಬ ತನ್ನ **ಕುದುರೆ**ಯನ್ನು ಏರಿಕೊಂಡು ಓಡಿಹೋದನು.

ಆ ಬಳಿಕ ಆರು ವರುಷದನಂತರ ತಾನು ಬೋಧಿಯನ್ನು ಸಾಕ್ಷಾತ್ಕರಿಸಿಕೊಂಡ ಮೇಲೆ, ಆ ಧರ್ಮವನ್ನು ಲೋಕಕ್ಕೆ ಘೋಷಣೆ ಮಾಡಿದನು. ಬುದ್ಧನ ಈ ಘೋಷಣೆಗಳನ್ನು '**ಸಿಂಹನಾದ**'ಗಳೆಂದು ಕರೆಯುತ್ತಾರೆ.

—ಹೀಗೆ, ಬೌದ್ಧ ಆವರಣದಲ್ಲಿ, ಬುದ್ಧನಾಗುವವನು ತಾಯ ಗರ್ಭಕ್ಕೆ ಅವತರಿಸಿದ್ದನ್ನು **ಆನೆಯೂ** ಬುದ್ಧನಾಗುವವನು ಮನೆಬಿಟ್ಟು ವಿರಕ್ತನಾಗಿ ಓಡಿಹೋದುದನ್ನು **ಕುದುರೆಯೂ** ಬುದ್ಧನಾದವನು ಧರ್ಮೋಪದೇಶ ಮಾಡಿದುದನ್ನು **ಸಿಂಹವೂ** ಚಿತ್ರಲಿಪಿಯಲ್ಲಿ ತಿಳಿಸುತ್ತದೆ.

ಈ ಮೂರು ಮೃಗಗಳ ಜೊತೆಯಲ್ಲಿರುವ ನಾಲ್ಕನೆಯದಾದ ಗೂಳಿ ಬುದ್ಧನ ಜನ್ಮವನ್ನು ಸೂಚಿಸುತ್ತದೆಯೆಂದು ಹೇಳುತ್ತಾರೆ. ಏಕೆಂದರೆ, ಸಿಂಹಗಳ ಕಾಲಿನಡಿಯ ಶಿಲಾಪೀಠವನ್ನು ನಾವು **ಪ್ರದಕ್ಷಿಣವಾಗಿ** ಗಮನಿಸುತ್ತ ಬಂದರೆ ಈ ನಾಲ್ಕು ಮೃಗಗಳೂ ಈ ಕ್ರಮದಲ್ಲಿ ಕಂಡುಬರುತ್ತವೆ: ಮೊದಲು **ಆನೆ,** ಅನಂತರ **ಗೂಳಿ,** ಆ ಮೇಲೆ **ಕುದುರೆ,** ಕಡೆಗೆ **ಸಿಂಹ.** ಈ ಕ್ರಮವನ್ನು ನೋಡಿದರೆ, ಆನೆ ಕುದುರೆಗಳಿಗೆ ನಡುವೆ ಬರುವ ಗೂಳಿಯು ಬುದ್ಧನ ಅವತಾರಕ್ಕೂ ಗೃಹತ್ಯಾಗಕ್ಕೂ ನಡುವೆ ನಡೆದ ಜನ್ಮವನ್ನು ಸೂಚಿಸುತ್ತದೆಯೆಂಬುದು ಯುಕ್ತಿಯುಕ್ತವಾದದ್ದೇ.

ನಾವು ಯಾರನ್ನು 'ಬುದ್ಧ' ಎಂದು ಕರೆಯುತ್ತೇವೆಯೋ ಆತನು ಒಂದೇ ಜನ್ಮದಲ್ಲಿ ಬುದ್ಧತ್ವವನ್ನು ಪಡೆಯಲಿಲ್ಲ; ಅನೇಕ ಜನ್ಮಗಳಲ್ಲಿ ಬುದ್ಧತ್ವವನ್ನು ಸಂಪಾದಿಸಿಕೊಳ್ಳುತ್ತಾ ಬೆಳೆದು, ತನ್ನ ಕಡೆಯ ಜನ್ಮದಲ್ಲಿ ಬುದ್ಧನಾದನು, ಸಮ್ಯಕ್ ಸಂಬುದ್ಧನಾದನು. ಈತನು ಆ ತನ್ನ ಹಿಂದಿನ ಜನ್ಮಗಳಲ್ಲಿ ಕೆಲವು ಸಲ ಆನೆಯಾಗಿ, ಕೆಲವು ಸಲ ಗೂಳಿಯಾಗಿ, ಕೆಲವು ಸಲ ಕುದುರೆಯಾಗಿ, ಇನ್ನು ಕೆಲವು ಸಲ ಸಿಂಹವಾಗಿ ಜನ್ಮ ತಾಳಿದ್ದನೆಂದು ಬೌದ್ಧರಲ್ಲಿ ನಂಬಿಕೆಯಿದೆ. ಈ ಚಿಹ್ನೆಗಳನ್ನು ನೋಡಿದವರಿಗೆ ಬುದ್ಧನ ಆ ಪೂರ್ವಜನ್ಮವೃತ್ತಾಂತಗಳು ನೆನಪಾಗುವುದೂ ಸಹಜವೇ.



ಈ ಎಲ್ಲ ಸಂಬಂಧಗಳಿರುವುದರಿಂದ, ಈ ನಾಲ್ಕು ಪ್ರಾಣಿಗಳು, ತನ್ನ ಸ್ವಪ್ರಯತ್ನದಿಂದ ತನ್ನನ್ನು ತಾನು ಬೆಳೆಸಿಕೊಂಡು ಪರಿಪೂರ್ಣನಾದ ಮಹಾಪುರುಷನೊಬ್ಬನ ಜೀವನಯಾತ್ರೆಯ ವಿವಿಧ ಅವಸ್ಥೆಗಳನ್ನು ಸೂಚಿಸುತ್ತವೆ ಎಂದು ನಿಶ್ಶಂಕೆಯಿಂದ ನಂಬಬಹುದು.

೫

ಹೀಗೆ ಅರ್ಥವಾಗುವ ಈ ನಾಲ್ಕು ಪ್ರಾಣಿಗಳ ಪಂಕ್ತಿಯನ್ನು ಉಳ್ಳ ಈ ಚಕ್ರಾಕಾರವಾದ ಶಿಲಾಪೀಠದ ಅಂಚನ್ನು ಉದ್ದಕ್ಕೆ ಬಿಡಿಸಿಕೊಂಡು ನೋಡೋಣ. ಆನೆಯ ಹಿಂದಿರುವ ಚಕ್ರವನ್ನು ಅರ್ಧಮಾಡಿ, ಆ ಪೀಠದ ಅಂಚನ್ನು ಹರವಿಕೊಳ್ಳೋಣ. ಅದು ಹೇಗೆ ಕಾಣುತ್ತದೆ ಎಂಬುದು ಅಡಿಯಲ್ಲಿದೆ.

ಒಂದು ಕ್ಷಣದಲ್ಲಿ ನೋಡಿದರೆ, ಈ ನಾಲ್ಕು ಪ್ರಾಣಿಗಳೂ ತಮ್ಮ ತಮ್ಮ ಮುಂದಿನ ಚಕ್ರವನ್ನು ತಾವು ನಡಸುತ್ತಿವೆಯೋ ಎಂದೆನ್ನಿಸುತ್ತದೆ. ಇನ್ನೊಂದು ಕ್ಷಣದಲ್ಲಿ ನೋಡಿದರೆ, ಈ ಒಂದೊಂದು ಪ್ರಾಣಿಯನ್ನೂ ಅದರ ಹಿಂದಿನ ಚಕ್ರ ಮುಂದಕ್ಕೆ ನಡಸುತ್ತಿದೆಯೋ ಎಂದೆನ್ನಿಸುತ್ತದೆ. ಈ ಚಿಹ್ನೆಗಳಿಗೆ ಅರ್ಥವೇನೆಂಬುದನ್ನು ಮೇಲೆ ತಿಳಿದಿರುವ ನಮಗೆ, ಈ ಬಿಚ್ಚಿಟ್ಟ ಅಂಚನ್ನು ನೋಡಿದರೆ—ಧರ್ಮಚಾರಿಯಾದವನು ಧರ್ಮವನ್ನು ಮುಂದಕ್ಕೆ ನಡಸುತ್ತಾನೆಯೋ? ಅಥವಾ ಧರ್ಮವು ಧರ್ಮಚಾರಿಯನ್ನು ಮುಂದಕ್ಕೆ ನಡಸುತ್ತದೆಯೋ?—ಎಂದೆನ್ನಿಸುತ್ತದೆ. ವಾಸ್ತವವಾದ ಸತ್ಯವೇನೆಂದರೆ: ಧರ್ಮವೂ ಧರ್ಮಚಾರಿಯೂ ಪರಸ್ಪರ ಅವಲಂಬಿಗಳು. ಧರ್ಮದಿಂದ ಧರ್ಮಚಾರಿಯ ಉತ್ಕರ್ಷ, ಧರ್ಮಚಾರಿಯಿಂದ ಧರ್ಮದ ಪ್ರವರ್ತನ.



ಇದು ಸಾರನಾಥದ ಅಶೋಕಶಿಲಾಸ್ತಂಭದ ತುದಿಯಲ್ಲಿದ್ದ ಸಿಂಹಶೀರ್ಷದ ನಡುವಿನ ಶಿಲಾಪೀಠದ ಅಲಂಕಾರಗಳ ಅರ್ಥ. ಈ ಪೀಠದಲ್ಲಿರುವ ಚಕ್ರವನ್ನೇ ನಾವು 'ಅಶೋಕಚಕ್ರ'ವೆಂದು ಈಗ ವ್ಯವಹರಿಸುತ್ತಿರುವುದು.

೬

ಈಗ, ಸಮಗ್ರ ಸಿಂಹಶೀರ್ಷದ ಕಟ್ಟಡವನ್ನು ಸ್ವಲ್ಪ ಗಮನಿಸೋಣ. ಮೇಲಿನಿಂದ ಕೆಳಗೆ ಬಂದರೆ—

೧ **ಮಹಾಚಕ್ರ**
೪ **ಮಹಾಸಿಂಹಗಳು**
೮ **ಅಲಂಕಾರ ವಸ್ತುಗಳು (೪ ಪ್ರಾಣಿ+೪ ಚಕ್ರ)**
೧೬ **ದಳಗಳ ಕಮಲ**

ಎಂಬ ಈ ಪ್ರಕಾರವಾಗಿಯೂ, ಕೆಳಗಿನಿಂದ ಮೇಲಕ್ಕೆ ಹೋದರೆ,

೧೬ **ದಳಗಳ ಕಮಲ**
೨೪ **ಅರಗಳ ಚಕ್ರ**
೩೨ **ಅರಗಳ ಮಹಾಚಕ್ರ**

ಎಂಬ ಈ ಪ್ರಕಾರವಾಗಿಯೂ ಸಂಖ್ಯೆಗಳು ಗೋಚರವಾಗುತ್ತವೆ.

ಎಲ್ಲ ದೇಶಗಳಲ್ಲಿಯೂ ಕೆಲವು ನಿರ್ದಿಷ್ಟವಾದ ಸಂಖ್ಯೆಗಳು ಕೆಲವು ನಿರ್ದಿಷ್ಟವಾದ ಭಾವನೆಗಳನ್ನು ಶ್ರೋತೃಗಳ ಮನಸ್ಸಿಗೆ ತರುತ್ತವೆ. ನಮ್ಮಲ್ಲಿಯಾದರೂ ಹಾಗೆಯೇ. ಉದಾಹರಣೆಗೆ: ಮೂರು ಎಂದರೆ ತ್ರಿಮೂರ್ತಿ, ತ್ರಿವೇಣಿ, ತ್ರಿನೇತ್ರ ಮುಂತಾದುವೂ; ಐದು ಎಂದರೆ ಪಂಚಭೂತ, ಪಂಚಪ್ರಾಣ, ಪಂಚಬಾಣ, ಪಂಚಾಗ್ನಿ, ಪಂಚಮುಖ ಮೊದಲಾದುವೂ; ಆರು ಎಂದರೆ ಷಣ್ಮತ, ಷಟ್ಕರ್ಮ, ಷಡಾನನ, ಇವೇ ಆದಿಯಾಗಿಯೂ; ಇದೇ ಪ್ರಕಾರವಾಗಿ ಸಪ್ತಋಷಿ, ಸಪ್ತಾರ್ಚಿ, ಸಪ್ತತಂತು, ಸಪ್ತಾಶ್ವ, ದಶಾವತಾರ, ಏಕಾದಶರುದ್ರರು, ದ್ವಾದಶಾದಿತ್ಯರು, ಚತುರ್ದಶ ಭುವನಗಳು,—ಎಂಬ ಭಾವನೆಗಳು ವೈದಿಕರಿಗೆ ಸಹಜವೆನ್ನಿಸುತ್ತವೆ. ಅದರಂತೆಯೇ ಶಿವಾಚಾರದವರಿಗೆ ಪಂಚಾಕ್ಷರಿ, ಷಡಕ್ಷರಿ, ಷಟ್ಸ್ಥಲ, ಅಷ್ಟಾವರಣ, ಅರವತ್ತುಮೂವರು ಪುರಾತನರು ಎಂಬುದೂ; ಜೈನರಿಗೆ ರತ್ನತ್ರಯ, ಪಂಚಕಲ್ಯಾಣ, ಪಂಚಪರಮೇಷ್ಠಿ, ಷಡ್ದ್ರವ್ಯ, ಚತುರ್ವಿಂಶತಿ ಜಿನರು, ತ್ರಿಷಷ್ಟಿ ಶಲಾಕಾ ಪುರುಷರು ಎಂಬುದೂ ಆಯಾ ಸಂಖ್ಯೆಗಳನ್ನು ಕೇಳಿದೊಡನೆ ಹೊಳೆಯುತ್ತದೆ.

ಇಲ್ಲಿ ಪ್ರಕೃತವಾಗಿರುವ ೧, ೪, ೮, ೧೬ ಎಂದು ಮೊದಲಾದ ಸಂಖ್ಯಾಕ್ರಮ ವಾದರೂ ಈ ದೇಶದ ಮನಸ್ಸನ್ನು ಹಿತವಾಗುವಂತೆ ಕಲಕುವ ಸಾಮರ್ಥ್ಯವುಳ್ಳದ್ದೇ. ಒಂದೆಂಬುದು—ವಿಪ್ರರು ಯಾವುದನ್ನು 'ಬಹು'ವೆಂದು ಹೇಳುತ್ತಾರೋ ಆ 'ಏಕಂ' ಆದ '**ಸತ್**'. ನಾಲ್ಕೆಂಬುದು—ನಾಲ್ಕು ದಿಕ್ಕುಗಳು, ನಾಲ್ಕು ಪುರುಷಾರ್ಥಗಳು, ನಾಲ್ಕು ವೇದಗಳು, ನಾಲ್ಕು ವರ್ಣಗಳು, ನಾಲ್ಕು ಗತಿಗಳು, ನಾಲ್ಕು ಮುಖದ ಬ್ರಹ್ಮ, ನಾಲ್ಕು ತೋಳಿನ ನಾರಾಯಣ, ರಾಜನ ಚತುರಂಗಸೇನೆ, ನೀತಿವಿದರ ಚತುರೋಪಾಯ ಗಳು, ಭೂಮಿಯನ್ನು ಬಳಸಿರುವ ನಾಲ್ಕು ಸಾಗರಗಳು. ಎಂಟೆಂಬುದು—ಅಷ್ಟದಿಕ್ಕು ಗಳು, ಅಷ್ಟದಿಗ್ಗಜಗಳು, ಅಷ್ಟದಿಕ್ಪಾಲಕರು, ಅಷ್ಟವಸುಗಳು, ಅಷ್ಟಸಿದ್ಧಿಗಳು, ಅಷ್ಟಾಂಗವಾದ ಯೋಗ, ಯೋಗೀಶ್ವರನಾದ 'ಅಷ್ಟಮೂರ್ತಿ' ಶಿವ. ಹದಿನಾರೆಂಬುದು ಷೋಡಶಕಲೆ, ಷೋಡಶದಾನ, ಷೋಡಶೋಪಚಾರ. ಇಪ್ಪತ್ತನಾಲ್ಕೆಂಬುದು ಸಂವತ್ಸ ರದ ಎರಡು ಅಯನಗಳ, ಆರು ಋತುಗಳ, ಹನ್ನೆರಡು ಮಾಸಗಳ, ಇಪ್ಪತ್ತನಾಲ್ಕು ಪಕ್ಷಗಳು. ಮೂವತ್ತೆರಡು ಎಂಬುದು ಧರ್ಮದಿಂದ ರಾಜ್ಯವಾಳಿದ ರಾಜಾ ವಿಕ್ರಮಾ ದಿತ್ಯನ ಕೀರ್ತಿಯನ್ನು ಹಾಡಿ ಹೊಗಳಿದ ಅವನ ಸಿಂಹಾಸನದ ಬತ್ತೀಸಪುತ್ಥಳಿಗಳು.

ಇದರ ಹಾಗೆಯೇ, ಬೌದ್ಧ ಆವರಣದಲ್ಲಿ ಓಡಿಯಾಡಿರುವವರಿಗೆ ಈ ಬೌದ್ಧ ಶಿಲ್ಪದಲ್ಲಿನ ಒಂದೊಂದು ಸಂಖ್ಯೆಯೂ ಒಂದೊಂದು ಖಚಿತವಾದ ಭಾವಸಾಪಚರ್ಯ ವನ್ನು ಪಡೆದುಕೊಂಡಿರುತ್ತದೆ.

**ಒಂದು** ಎಂಬುದು 'ಏಕಮೇವ, ಅದ್ವಿತೀಯ' ಎನ್ನಿಸಿದ **ನಿರ್ವಾಣ.** ನಿರ್ವಾಣವೆಂಬುದು ಬೇರೆ ಏನೂ ಅಲ್ಲ; ದುಃಖವಿಲ್ಲದ ಸ್ಥಿತಿ, ಅ-ಶೋಕವೆನ್ನಿಸಿದ ಅವಸ್ಥೆ. ಇದೇ ನಿರ್ವಾಣ.

**ನಾಲ್ಕು** ಎಂಬುದು ಬುದ್ಧನು ತನ್ನ ಪ್ರಥಮ ಧರ್ಮಚಕ್ರ ಪ್ರವರ್ತನದಲ್ಲಿ ಹೇಳಿದ **ನಾಲ್ಕು ಆರ್ಯಸತ್ಯಗಳು.** ಲೋಕದಲ್ಲಿ ದುಃಖ ಉಂಟು, ಈ ದುಃಖಕ್ಕೆ ಕಾರಣ ಉಂಟು, ಕಾರಣವನ್ನು ಕಳೆದರೆ ಕಾರ್ಯವಾದ ದುಃಖವೂ ಅಳಿಯುತ್ತದೆ, ಕಾರಣವನ್ನು ಕಳೆಯುವುದಕ್ಕೆ ಇದು ದಾರಿ—ಎಂಬುದೇ ಈ ನಾಲ್ಕಾದ ಆರ್ಯಸತ್ಯ.

**ಎಂಟು** ಎಂಬುದು ಮೇಲಿನ ಸತ್ಯಗಳಲ್ಲಿ ನಾಲ್ಕನೆಯದಾದ **ಆರ್ಯ ಅಷ್ಟಾಂಗಿಕ ಮಾರ್ಗ.** ಮನಸ್ಸು ಮಾತು ಮೈಗಳೆಂಬ ತ್ರಿಕರಣಗಳಿಂದಲೂ ಧರ್ಮವನ್ನು

ಆಚರಿಸುವುದು ಹೇಗೆ ಎಂಬುದನ್ನು ಈ ಅಷ್ಟಾಂಗಮಾರ್ಗ ಎಂಟಾಗಿ ಒಡೆದು ತೋರಿಸುತ್ತದೆ.

**ಹದಿನಾರು** ಎಂಬುದು ಬುದ್ಧನ ಕಾಲದ ಭಾರತದಲ್ಲಿದ್ದ **ಷೋಡಶ ಮಹಾ ಜನಪದಗಳು.** ಈಗಿನ ಕಾಲದಲ್ಲಿ ಪ್ರಾಂತ್ಯಗಳಿರುವಂತೆ ಆಗಿನ ಕಾಲದಲ್ಲಿದ್ದ ಹದಿನಾರು ಮಹಾಜನಪದಗಳಿಗಾಗಿ, ಅವುಗಳ ಮೂಲಕ ಸಕಲಲೋಕಕ್ಕಾಗಿ, ಬುದ್ಧನು ತನ್ನ ಧರ್ಮಚಕ್ರವನ್ನು ಪ್ರವರ್ತನಮಾಡಿದನು.

**ಇಪ್ಪತ್ತನಾಲ್ಕು** ಎಂಬುದು ಕಾಲಗಣನೆಗೆ ಮಾನವಾದ ಸಂವತ್ಸರದ **ಇಪ್ಪತ್ತನಾಲ್ಕು ಪಕ್ಷಗಳು.** ಧರ್ಮವನ್ನು ಆಚರಿಸುವವನು ಸದಾ **ಅಪ್ರಮತ್ತ**ನಾಗಿರಬೇಕು, ಎಚ್ಚತ್ತಿರಬೇಕು ಎಂಬುದನ್ನು ಇಪ್ಪತ್ತನಾಲ್ಕು ಪಕ್ಷಗಳೆಂಬ ಅರಗಳನ್ನುಳ್ಳ **ಕಾಲಚಕ್ರ** ಸದಾ ಜ್ಞಾಪಿಸುತ್ತಿರುತ್ತದೆ. ಧರ್ಮವನ್ನು ಆಚರಿಸುವವನು— ಒಂದು ಪಕ್ಷದಲ್ಲಿ ಚಂದ್ರನು ತುಂಬುತ್ತ ಬರುವಂತೆ, ಇನ್ನೊಂದು ಪಕ್ಷದಲ್ಲಿ ತೇಯುತ್ತ ಹೋಗುವಂತೆ— ತನಗೆ ಸುಖ ಬರಲಿ, ದುಃಖ ಬರಲಿ, ಲಾಭವಾಗಲಿ, ನಷ್ಟವಾಗಲಿ, ಸ್ತುತಿ ಬರಲಿ, ನಿಂದೆ ಬರಲಿ, ಏನೇ ಪರಿಳಿತಗಳು ಸಂಭವಿಸಿದರೂ ಸದಾ **ಆತಾಪಿಯಾಗಿ,** ಸದಾ ಪರಾಕ್ರಮಿಯಾಗಿ, ಸದಾ ಕಾರ್ಯತತ್ಪರನಾಗಿ ಇರಬೇಕು—ಎಂಬುದನ್ನು ಇಪ್ಪತ್ತುನಾಲ್ಕು ಅರಗಳನ್ನುಳ್ಳ ಈ **ಧರ್ಮಚಕ್ರ** ಸದಾ ಜ್ಞಾಪಿಸುತ್ತಿರುತ್ತದೆ.

**ಮೂವತ್ತೆರಡು** ಎಂಬುದು ಮಹಾಪುರುಷರಾದವರ **ಮೂವತ್ತೆರಡು ಮಹಾಪುರುಷ ಲಕ್ಷಣಗಳು.** ಧರ್ಮದ ಅಂಗ ಪ್ರತ್ಯಂಗಗಳೆಲ್ಲವನ್ನೂ ನಡೆಸಿ, ನಿರ್ವಾಣವನ್ನು ಸಾಧಿಸುವವರಿಗೆ ಮೂವತ್ತೆರಡು ದೇಹಲಕ್ಷಣಗಳು ಪ್ರಾಪ್ತವಾಗುತ್ತವೆಂದು ಬೌದ್ಧಗ್ರಂಥಗಳು ಹೇಳುತ್ತವೆ.

“ಕೆಳಗೆ ನಿಂತಿರುವ ದೇಶಗಳೆಲ್ಲವೂ ಆ ಬಹುಮೇಲಿನ, ದುಃಖವಿಲ್ಲದೆ ಅ-ಶೋಕವಾದ ಸ್ಥಿತಿಯನ್ನು ಪಡೆಯಬೇಕಾದರೆ— ಇರುವ ದುಃಖದ ಸ್ವರೂಪವನ್ನು ತಿಳಿಯಬೇಕು ; ಆ ದುಃಖಕ್ಕೆ ಕಾರಣವೇನೆಂಬುದನ್ನು ಕಾಣಬೇಕು ; ಆ ಕಾರಣವನ್ನು ಕಳೆಯಬಲ್ಲೆನೆಂದು ನಂಬಬೇಕು ; ಕಡೆಗೆ, ಕರ್ತವ್ಯವೇನೋ ಅದನ್ನು ತಿಳಿದು, ಅದಕ್ಕಾಗಿ ಕಾಯೇನ ವಾಚಾ ಮನಸಾ ದುಡಿಯಬೇಕು ; ಈ ದುಡಿಮೆಯಲ್ಲಿ ಒಂದು ಕ್ಷಣವಾದರೂ ಎಚ್ಚರ ತಪ್ಪಬಾರದು, ಒಂದು ಕ್ಷಣವಾದರೂ ಉತ್ಸಾಹ ಕುಗ್ಗಬಾರದು” ಎಂಬ ಮಹಾಸಂದೇಶವನ್ನೇ ಈ ಸಾರನಾಥದಲ್ಲಿದ್ದ ಅಶೋಕ

ಶಿಲಾಸ್ತಂಭದ ಸಿಂಹಶೀರ್ಷವು ಸಾರಿ ಹೇಳುತ್ತಿದೆ. ಅದರ ಹದಿನಾರು ದಳಗಳ ಕಮಲದಿಂದ, ಅದರ ಮೇಲಿನ ಎಂಟು ಅಲಂಕಾರಗಳ ಶಿಲಾಪೀಠದಿಂದ, ಆ ಪೀಠದ ಒಂದೊಂದು ಧರ್ಮಚಕ್ರದ ಆಧಾರದ ಮೇಲೂ ಸುಸ್ಥಿರವಾಗಿ ನಿರ್ಭೀತವಾಗಿ ನಿಂತ ನಾಲ್ಕು ಮಹಾಸಿಂಹಗಳ ಸಂಘಾತದಿಂದ, ಈ ಎಲ್ಲದರ ಮೇಲೆ ಶಿಖರವಾಗಿ ನಿಂತಿದ್ದ ಆ ಐಕ್ಯೈಕ ಅಖಂಡಚಕ್ರದಿಂದ ಈ ಮಹಾಸಂದೇಶ ಸುಂದರದೃಶ್ಯವಾಗಿ ರೂಪುಗೊಂಡಿದೆ.

ಇಂತಹ ಅನುತ್ತರವಾದ ಧರ್ಮಶಿಲ್ಪದ ಹೃದಯದಿಂದ ಬಂದು, ಭಾವುಕರಿಗೆ ಇಷ್ಟೆಲ್ಲಾ ಉತ್ತಮಭಾವನೆಗಳನ್ನು ತಂದು, **ಅಪ್ರಮಾದ**ವನ್ನೂ **ಆತಾಪ**ವನ್ನೂ ಬೋಧಿಸಿ, ಅಶೋಕದ ಕಡೆಗೆ ನಾಡನ್ನು ಒಯ್ಯುವ ಚಕ್ರವನ್ನೇ ನಮ್ಮ ರಾಷ್ಟ್ರಧ್ವಜ 'ಅಶೋಕಚಕ್ರ'ವೆಂದು ಸ್ವೀಕರಿಸಿಕೊಂಡಿದೆ.

೭

ನಮ್ಮ ಹಿಂದಿನ ತ್ರಿವರ್ಣಧ್ವಜದಲ್ಲಿ ಬರಿಯ 'ಚರಖ'ದ ಚಿಹ್ನೆಯಿದ್ದರೂ, ಅದರೊಡನೆ ಹಂಜಿ, ದಾರ, ದಾರ ತೆಗೆಯುವವರು ಮುಂತಾದುವನ್ನೂ ಭಾವಿಸಿಕೊಳ್ಳುತ್ತಿದ್ದೆವು. ಅದರಂತೆಯೇ ಈ ಹೊಸ ತ್ರಿವರ್ಣಧ್ವಜದಲ್ಲಿ ಬರಿಯ 'ಚಕ್ರ'ದ ಚಿಹ್ನೆ ಮಾತ್ರವಿದ್ದರೂ, ಅದರೊಡನೆ ಚರಖದ ಪೀಠ, ಕದಿರು ಮುಂತಾದುವು ಇವೆ ಎಂದು ಆ ಚಕ್ರವನ್ನೇ ಚರಖವಾಗಿ ಕಲ್ಪಿಸಿಕೊಳ್ಳುತ್ತೇವೆ. ಅದರ ಹಾಗೆಯೇ ಈ ಹೊಸ ಬಾವುಟದಲ್ಲಿನ ಚಕ್ರವನ್ನು **'ಸಾರನಾಥದ ಅಶೋಕಚಕ್ರ'**ವೆಂದು ಕರೆದಿರುವುದರಿಂದ, ಈ ಚಕ್ರಕ್ಕೆ ಮಾತೃಭೂಮಿಯಾದ ಇಡಿಯ ಸಿಂಹಶೀರ್ಷವನ್ನೇ ಭಾವಿಸಿಕೊಳ್ಳಬೇಕು. ಈ ಧ್ವಜದ ಮೂರು ಬಣ್ಣಗಳೂ ಈ ಭಾವನೆಗೆ ತುಂಬ ಅನುಕೂಲವಾಗುತ್ತವೆ.

ಮೇಲಿನ **ಕೇಸರಿ ಬಣ್ಣ**ವು ಕೇಸರಗಳನ್ನು ಪಡೆದು 'ಕೇಸರಿ' ಎನ್ನಿಸಿದ **ಸಿಂಹ**ವನ್ನೂ, ನಡುವಣ **ಬಿಳಿಯ ಬಣ್ಣ**ವು ಬುದ್ಧನು ಸ್ವರ್ಗದಿಂದ ಇಳಿದುಬಂದಾಗ ತಾಳಿದ **ಬಿಳಿಯ ಆನೆ**ಯ ರೂಪವನ್ನೂ, ಕೆಳಗಿನ **ಹಸಿರು** ಸದಾ ತನ್ನವರನ್ನು ಹಸುರಿನ ಕಡೆಗೆ ನಡೆಸುವ ಗವಾಂಪತಿಯಾದ **ವೃಷಭ**ವನ್ನೂ ನೆನಪಿಗೆ ತರುವ ಹಾಗೆಯೇ ಧ್ವಜಸ್ತಂಭದ ತುತ್ತತುದಿಯ ವಾಯುಮಂಡಲದಲ್ಲಿ ಪತಾಕೆಯು **ಹಾರಾಡುವ ಲೀಲೆ** ವೇಗಶಾಲಿಯಾದ **ಕುದುರೆ**ಯ ತ್ವರಿತಗಮನವನ್ನು ಜ್ಞಾಪಿಸುತ್ತಿದ್ದರೆ— ಈ ಅಶೋಕ ಚಕ್ರಾಂಕಿತವಾದ ತ್ರಿವರ್ಣಧ್ವಜವು ಮರೆಯಾಗಿರುವ ಸಾರನಾಥದ ಸಿಂಹಶೀರ್ಷಕ್ಕೆ ಪ್ರತ್ಯಕ್ಷ ಪ್ರತಿನಿಧಿಯೆನ್ನಿಸುತ್ತದೆ.

# ಧರ್ಮಚಕ್ರ

## (ಅದರ ಸನಾತನವಾದ ಪರಂಪರೆ)



ಸಾರನಾಥದ ಸಿಂಹಶೀರ್ಷದ ನೆತ್ತಿಯ ಮೇಲೆ, ಹಿಂದಿನ ಕಾಲದಲ್ಲಿ ಮೂವತ್ತೆರಡು ಅರಗಳ ಮಹಾಚಕ್ರವಿತ್ತೆಂದೂ, ಈಗ ಅದು ಮುರಿದುಹೋಗಿ ನಷ್ಟವಾಗಿದೆಯೆಂದೂ, ಅದರ ಕೆಲವು ಚೂರು ದೊರಕಿವೆಯೆಂದೂ, ಹಿಂದೆ ಹೇಳಿತು.

ಸಿಂಹಗಳ ಮೇಲೆ ಆ ಚಕ್ರ ಹೇಗೆ ಕಾಣುತ್ತಿದ್ದಿರ ಬೇಕು—ಎಂಬುದನ್ನು ಕಲ್ಪಿಸಿ ಹಿಂದಿನ ಪುಟದಲ್ಲಿ ಕಾಣಿಸ ಲಾಗಿದೆ.

# ಧರ್ಮಚಕ್ರ

೧

ನಚಿಕೇತನಿಗೆ ಅಮೃತತತ್ವದ ರಹಸ್ಯವನ್ನು ಉಪದೇಶ ಮಾಡುವಾಗ ಧರ್ಮ ದೇವತೆಯು 'ಆತ್ಮಾನಂ ರಥಿನಂ ವಿದ್ಧಿ' ಎಂಬ ಮಹಾವಾಕ್ಯವನ್ನು ಹೇಳಿದನು.

> "ಆತ್ಮವನ್ನು ರಥದಲ್ಲಿ ಇರುವವನೆಂದೂ ಶರೀರವನ್ನು ರಥವೇ ಎಂದೂ ತಿಳಿ. ಬುದ್ಧಿಯನ್ನು ಸಾರಥಿಯೆಂದೂ ಮನಸ್ಸನ್ನು ಹಗ್ಗವೇ ಎಂದೂ ತಿಳಿ. ಇಂದ್ರಿಯಗಳನ್ನು ಕುದುರೆಗಳೆಂದೂ ವಿಷಯಗಳನ್ನು ಅವು ಮೇಯುವ ಹೊಲಗಳೆಂದೂ ಹೇಳುತ್ತಾರೆ. ಆತ್ಮ, ಇಂದ್ರಿಯ, ಮನಸ್ಸು ಗಳಿಂದ ಕೂಡಿದವನನ್ನು 'ಭೋಕ್ತಾ' ಎಂದು ವಿದ್ವಾಂಸರು ಹೇಳು ತ್ತಾರೆ."

ಇಂಥದೇ ಮಹಾವಾಕ್ಯವನ್ನು ಭಗವಂತನಾದ ಬುದ್ಧನು 'ಉಜುಕೋ ನಾಮ ಸೋ ಮಗ್ಗೋ' ಎಂದು ಮೊದಲಾಗುವ ಮೂರು ಗಾಹೆಗಳಲ್ಲಿ ಪ್ರತಿಪಾದಿ ಸಿದನು.

> "ಆ ಮಾರ್ಗಕ್ಕೆ 'ಋಜುವಾದುದು' ಎಂದು ಹೆಸರು. ಆ ದಿಕ್ಕಿಗೆ 'ಅಭಯ' ಎಂದು ಹೆಸರು. 'ಧರ್ಮಚಕ್ರ'ಗಳಿಂದ ಕೂಡಿದ ರಥಕ್ಕೆ 'ವಕ್ರವಾಗಿ ಹೋಗದುದು' ಎಂದು ಹೆಸರು.
>
> "ಈ ರಥದ ಗಮನವನ್ನು ಕ್ರಮಗೊಳಿಸುವ ಸಾಧನವು 'ಲಜ್ಜೆ.' ಒಳಗಿರುವವರು ಬೀಳದಂತೆ ರಕ್ಷಿಸುವ ಸುತ್ತಿನ ಆವರಣವು 'ಸತ್ಯ.' 'ಧರ್ಮ'ವನ್ನು ನಾನು ಸಾರಥಿಯೆಂದು ಹೇಳುತ್ತೇನೆ. 'ಸಮ್ಯಕ್ ದೃಷ್ಟಿ'ಯೇ ಮುಂದೆ ವೇಗವಾಗಿ ಓಡುವ ಕುದುರೆಗಳು.
>
> "ಸ್ತ್ರೀಯಾಗಲಿ, ಪುರುಷನಾಗಲಿ, ಯಾರಿಗೆ ಈ ರೀತಿಯ ಯಾನ ವಿರುವುದೋ ಆ ಅವರೇ ಈ ಯಾನದಿಂದ ನಿರ್ವಾಣದ ಸಮೀಪಕ್ಕೇ ಹೋಗುವರು."

ಮೇಲಿನ ಮಹಾವಾಕ್ಯಗಳನ್ನು ಗಮನಿಸಿದರೆ, ಧರ್ಮರಾಜನಾದ ಯಮನು ಹೇಳಿದುದರಲ್ಲಿ ಗೂಢವಾಗಿದ್ದ 'ಧರ್ಮಚಕ್ರ'ದ ಭಾವನೆ ಧರ್ಮರಾಜನಾದ ಬುದ್ಧನ ಮಾತಿನಲ್ಲಿ ಚೆನ್ನಾಗಿ ವ್ಯಕ್ತವಾಗಿದೆ.

೨

ಒಂದು ಸಲ ಶೈಲನೆಂಬವನು ಬುದ್ಧನ ಬಳಿಗೆ ಬಂದು, ಆತನಲ್ಲಿ ಪ್ರಕಟವಾದ ಮಹಾಪುರುಷ ಲಕ್ಷಣಗಳನ್ನು ಕಂಡು, "ಭೋ ಗೌತಮ, ನಿನ್ನಂಥವನು ಹೀಗೆ ಭಿಕ್ಷುವಾಗುವುದು ಸಲ್ಲದು. ನಿನ್ನಂಥವನು ರಾಜನಾಗಬೇಕು, ಚಕ್ರವರ್ತಿಯಾಗ ಬೇಕು" ಎಂದು ಹೇಳಿದಾಗ ಭಗವಂತನು ಇಷ್ಟೇ ಹೇಳಿದನು:

ರಾಜಾಹಮಸ್ಮಿ ಸೇಲಾ ತಿ ಧಮ್ಮರಾಜಾ ಅನುತ್ತರೊ
ಧಮ್ಮೇನ ಚಕ್ಕಂ ವತ್ತೇಮಿ ಚಕ್ಕಂ ಅಪ್ಪಟಿವತ್ತಯಂ

"ನಾನು ರಾಜನಾಗಿದ್ದೇನೆ, ಶೈಲ. ಅನುತ್ತರನಾದ ಧರ್ಮರಾಜ ನಾಗಿದ್ದೇನೆ. ಧರ್ಮದಿಂದ ಚಕ್ರವನ್ನು ಉರುಳಿಸಿಕೊಂಡು ಹೋಗು ತ್ತೇನೆ. ಈ ಚಕ್ರವು ಹಿಂದಕ್ಕೆ ಉರುಳತಕ್ಕದ್ದಲ್ಲ."

ಈ ಧರ್ಮಚಕ್ರದ ಪ್ರವರ್ತನಕ್ಕಾಗಿಯೇ ಆತನ ಆಯುಷ್ಯವೆಲ್ಲ ಮೀಸಲಾ ಗಿತ್ತು. ಅಂದು ತಾನು ಸಾರನಾಥಕ್ಕೆ ಹೊರಡಬೇಕೆಂದು ನಿಶ್ಚಯಿಸಿದಾಗಲೇ ಉರು ವೇಲದ ಬೋಧಿವೃಕ್ಷದ ಬುಡದಲ್ಲಿ ಹೀಗೆ ಹೇಳಿಕೊಂಡನು:

ಧಮ್ಮಚಕ್ಕಂ ಪವತ್ತೇತುಂ ಗಚ್ಛಾಮಿ ಕಾಸಿನಂ ಪುರಂ
ಅನ್ಧಭೂತಸ್ಮಿಂ ಲೋಕಸ್ಮಿಂ ಆಹಞ್ಛಿ ಅಮತದುನ್ದ್ರಭಿಂ

"ಧರ್ಮಚಕ್ರವನ್ನು ಪ್ರವರ್ತಿಸುವುದಕ್ಕಾಗಿ ಕಾಶಿಗಳ ನಗರಕ್ಕೆ ಹೋಗುತ್ತೇನೆ. ಕಣ್ಣು ಕಾಣದಿರುವ ಲೋಕದಲ್ಲಿ ಅಮೃತದುಂದುಭಿ ಯನ್ನು ಹೊಡೆದು ಬಾರಿಸುತ್ತೇನೆ."

ಬುದ್ಧನು ಹೀಗೆ ಪ್ರವರ್ತನ ಮಾಡಬೇಕೆಂದು ಎತ್ತಿಕೊಂಡ 'ಧರ್ಮ'ವನ್ನು ಬುದ್ಧಘೋಷಾಚಾರ್ಯರು ತಮ್ಮ 'ಸುಮಂಗಲ ವಿಲಾಸಿನೀ' ಎಂಬ ದೀರ್ಘನಿಕಾಯ ವ್ಯಾಖ್ಯೆಯಲ್ಲಿ ಈ ರೀತಿಯಾಗಿ ಕೊಂಡಾಡಿದ್ದಾರೆ:

ಬುದ್ಧೋಪಿ ಬುದ್ಧಭಾವಂ ಭಾವೆತ್ವಾ ಚ ಸಚ್ಛಿಕತ್ವಾ ಚ
ಯಂ ಉಪಗತಂ ಗತಮಲೋ ವನ್ದೇ ತಂ ಅನುತ್ತರಂ ಧಮ್ಮಂ

"ಬುದ್ಧನು ಕೂಡ ಬುದ್ಧಭಾವವನ್ನು ಬೆಳೆಸಿಕೊಂಡು, ಸಾಕ್ಷಾ ತ್ಕರಿಸಿಕೊಂಡು, ಯಾವುದರ ಹತ್ತಿರ ಹೋಗಿ ತನ್ನ ಮಲಗಳನ್ನು ಕಳೆದು ಕೊಂಡನೋ—ಆ ಅನುತ್ತರವಾದ ಧರ್ಮಕ್ಕೆ ವಂದನೆ."

ಇದೇ ಧರ್ಮವನ್ನು ಕುರಿತು ಭಗವಂತನು ಬೇರೊಂದುಕಡೆ ಹೀಗೆ ಅಭಯ ಕೊಟ್ಟಿದ್ದಾನೆ:

ಧಮ್ಮೋ ಹವೆ ರಕ್ಖತಿ ಧಮ್ಮಚಾರಿಂ
ಧಮ್ಮೋ ಸುಚಿಣ್ಣೋ ಸುಖಮಾವಹಾತಿ
ಏಸಾನಿಸಂಸೋ ಧಮ್ಮೇ ಸುಚಿಣ್ಣೇ
ನ ದುಗ್ಗತಿಂ ಗಚ್ಛತಿ ಧಮ್ಮಚಾರೀ

"ಧರ್ಮವೇ ಧರ್ಮಚಾರಿಯನ್ನು ರಕ್ಷಿಸುತ್ತದೆ, ಚೆನ್ನಾಗಿ ನಡೆಸಿದ ಧರ್ಮವು ಸುಖವನ್ನು ತಂದುಕೊಡುತ್ತದೆ—ಎಂಬ ಈ ನಂಬಿಕೆಯಿಂದ ಧರ್ಮವನ್ನು ಚೆನ್ನಾಗಿ ನಡೆಸಿದರೆ, ಧರ್ಮಚಾರಿಯು ದುರ್ಗತಿಗೆ ಹೋಗುವುದಿಲ್ಲ."

ಮೇಲಿನ ಮಾತು ಭಗವಂತನಾದ ಶ್ರೀಕೃಷ್ಣನ ಕೆಲವು ಮಾತುಗಳನ್ನು ಜ್ಞಾಪಿಸುತ್ತದೆ:

ನೇಹಾಭಿಕ್ರಮನಾಶೋಽಸ್ತಿ
ಪ್ರತ್ಯವಾಯೋ ನ ವಿದ್ಯತೇ
ಸ್ವಲ್ಪಮಪ್ಯಸ್ಯ ಧರ್ಮಸ್ಯ
ತ್ರಾಯತೇ ಮಹತೋಭಯಾತ್

"ಇದರಲ್ಲಿ ಮುಂದೆ ಇಟ್ಟ ಹೆಜ್ಜೆ ನಷ್ಟವಾಗುವುದಿಲ್ಲ, ವಿಪರೀತವಾದ ಫಲ ಕಂಡುಬರುವುದಿಲ್ಲ. ಮಾಡಿದ ಧರ್ಮವು ಸ್ವಲ್ಪವಾದರೂ ಅದು ಮಹತ್ತಾದ ಭಯದಿಂದ ಕಾಪಾಡುತ್ತದೆ."

ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ
"ಕಲ್ಯಾಣ ಮಾಡಿದವನು ಯಾವನೂ ದುರ್ಗತಿಗೆ ಹೋಗುವುದಿಲ್ಲ."

ಏವಂಚ ಶ್ರೀಕೃಷ್ಣನ **ಸುದರ್ಶನಚಕ್ರ**ವೆಂದರೂ ಒಂದೇ, ಭಗವಾನ್ ಬುದ್ಧನ **ಧರ್ಮಚಕ್ರ**ವೆಂದರೂ ಒಂದೇ.

೩

ಹೀಗೆ ಚಕ್ರದ ರೂಪದಿಂದ ನಿರ್ದೇಶಿಸಿರುವ ಧರ್ಮವನ್ನು ವಿವರಿಸುವುದಕ್ಕಾಗಿ ಪ್ರಾಚೀನಕಾಲದಿಂದಲೂ ಅನೇಕ ಪ್ರಯತ್ನಗಳು ನಡೆದಿವೆ. ಇದೇ ಪರಂಪರೆಯಲ್ಲಿ ನಡೆದು ಬಂದ ಬುದ್ಧನು ಧರ್ಮವನ್ನು ಕುರಿತು ಹೇಳಿದ ಲಕ್ಷಣಗಳ ಸಾರವು **'ಧರ್ಮಪದ'**ವೆಂಬ ಗ್ರಂಥದಲ್ಲಿ ಅಡಕವಾಗಿದೆ.

ನಮ್ಮಲ್ಲಿಯಾದರೂ ಭಗವಾನ್ ವ್ಯಾಸರು ಧರ್ಮಸೂಕ್ಷ್ಮಗಳನ್ನೆಲ್ಲಾ ತಮ್ಮ ಭಾರತಕೃತಿಯಲ್ಲಿ ಕಾವ್ಯರೂಪದಿಂದ ಚಿತ್ರಿಸಿ, ಕಡೆಗೆ ಆ ಎಲ್ಲದರ ಸಾರವನ್ನು ಹೀಗೆ ಕ್ರೋಡೀಕರಿಸಿದರಂತೆ:

ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ
ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್

"ಧರ್ಮ ಸರ್ವಸ್ವವನ್ನು ಕಿವಿಗೊಟ್ಟು ಕೇಳಬೇಕು, ಕೇಳಿದಂತೆಯೇ ಮನಸ್ಸಿನಲ್ಲಿ ತಾಳಬೇಕು. ತನಗೆ ಪ್ರತಿಕೂಲವಾದುದನ್ನು ಇತರರಲ್ಲಿ ನಡಸುವುದು ಬೇಡ."

ಬುದ್ಧನಾದರೂ ಇದೇ ಭಾವವನ್ನು ಬೇರೆ ಮಾತುಗಳಲ್ಲಿ ಹೇಳಿದನು:

ಸಬ್ಬ ಪಾಪಸ್ಸ ಅಕರಣಂ ಕುಸಲಸ್ಸ ಉಪಸಂಪದಾ
ಸಚಿತ್ತ ಪರಿಯೋದಪನಂ ಏತಂ ಬುದ್ಧಾನ ಸಾಸನಂ

"ಎಲ್ಲಾ ಪಾಪಗಳನ್ನೂ ಮಾಡದೆ ಇರುವುದು; ಕುಶಲಗಳನ್ನು ಸೇವಿಸಿ ನಡಸುವುದು; ತನ್ನ ಚಿತ್ತವನ್ನು ನಿರ್ಮಲವಾಗಿರಿಸುವುದು; — ಇಷ್ಟೇ ಬುದ್ಧರುಗಳ ಶಾಸನ"

ಇದನ್ನೇ ಮತ್ತೆ ಮತ್ತೆ ಹೀಗೆ ಹೇಳಿದ್ದಾನೆ:

ಅಭಿತ್ಥರೇಥ ಕಲ್ಯಾಣೆ, ಪಾಪಾ ಚಿತ್ತಂ ನಿವಾರಯೆ
"ಪುಣ್ಯ ಮಾಡುವುದರಲ್ಲಿ ಹೆಚ್ಚು ತ್ವರೆಯಿರಲಿ, ಪಾಪ ಮಾಡುವುದರ ದೆಸೆಯಿಂದ ಚಿತ್ತವನ್ನು ತಡೆದು ನಿಲ್ಲಿಸು."

ಉತ್ತಿಟ್ಠೆ, ನಪ್ಪಮಜ್ಜೆಯ್ಯ, ಧಮ್ಮಂ ಚರೆ ಸುಚರಿತಂ
"ಎದ್ದೇಳು, ಪ್ರಮಾದ ಬೇಡ, ಸುಚರಿತವಾದ ಧರ್ಮವನ್ನು ಆಚರಿಸು"

ಸಚ್ಚಂ ಭಣೆ, ನ ಕುಜ್ಝೆಯ್ಯ, ದಜ್ಜಾಽಪ್ಪಸ್ಮಿಂಪಿ ಯಾಚಿತೊ
"ಸತ್ಯ ಹೇಳು. ಕೋಪಿಸದಿರು. ಬೇಡಿದರೆ ಸ್ವಲ್ಪವಾದರೂ ದಾನಮಾಡು."

ಅಕ್ಕೋಧೇನ ಜಿನೇ ಕೋಧಂ ಅಸಾಧುಂ ಸಾಧುನಾ ಜಿನೇ
ಜಿನೇ ಕದರಿಯಂ ದಾನೇನ ಸಚ್ಚೇನಾಲಿಕವಾದಿನಂ

"ಪ್ರೇಮದಿಂದ ಕ್ರೋಧವನ್ನು ಜಯಿಸು; ಕೆಟ್ಟದ್ದನ್ನು ಒಳ್ಳೆಯದರಿಂದ ಜಯಿಸು; ಕೃಪಣನನ್ನು ದಾನದಿಂದ ಜಯಿಸು; ಸುಳ್ಳಾಡುವವನನ್ನು ಸತ್ಯದಿಂದ ಜಯಿಸು."

ವಾಚಾನುರಕ್ಖೀ ಮನಸಾ ಸುಸಂವುತೊ
ಕಾಯೇನ ಚ ಅಕುಸಲಂ ನ ಕಯಿರಾ
ಏತೇ ತಯೋ ಕಮ್ಮಪಥೇ ವಿಸೋಧಯೆ
ಆರಾಧಯೆ ಮಗ್ಗಂ ಇಸಿಪ್ಪವೇದಿತಂ

"ಮಾತನ್ನು ಅನುಸರಿಸಿ ರಕ್ಷಿಸಿಕೊಂಡು, ಮನಸ್ಸಿನಿಂದ ಚೆನ್ನಾಗಿ ಸಂವರಿಸಿಕೊಂಡು, ದೇಹದಿಂದ ಯಾವ ಅಕುಶಲವನ್ನೂ ಮಾಡದೆ, ಈ ಮೂರು ಕರ್ಮದ ದಾರಿಗಳನ್ನು ವಿಶುದ್ಧವಾಗಿರಿಸಲಿ. ಋಷಿಯಿಂದ ಚೆನ್ನಾಗಿ ತಿಳಿಸಲ್ಪಟ್ಟ ಮಾರ್ಗವನ್ನು ಆರಾಧಿಸಲಿ."

ಇಂತಹ ಅನೇಕ ಸೂಕ್ತಿಸಂತಾನದಿಂದ ಬುದ್ಧನು ಧರ್ಮಚಕ್ರದ ಅನಂತವಾದ ಅರಗಳ ಪಂಕ್ತಿಯನ್ನು ಬಹುಜನಕ್ಕೆ ಪರಿಚಯಮಾಡಿಸಿದ್ದಾನೆ.

ಇಂತಹ ಅಮೋಘವಾದ ಧರ್ಮಚಕ್ರಕ್ಕೆ ಮುಖಗಳು ಎರಡು: ಒಂದು **ಅಪ್ರಮಾದ ;** ಇನ್ನೊಂದು ಆತಾಪ, ಎಂದರೆ ನಿರಂತರವಾದ ಪರಾಕ್ರಮ.

ಅಪ್ಪಮಾದೇನ ಮಘವಾ ದೇವಾನಂ ಸೆಟ್ಠತಂ ಗತೋ

"ಅಪ್ರಮಾದದಿಂದ ಮಘವಾನನು ದೇವತೆಗಳಲ್ಲಿ ಶ್ರೇಷ್ಠನಾದನು."

ಅಪ್ಪಮಾದೋ ಅಮತಪದಂ, ಪಮಾದೋ ಮಚ್ಚುನೋ ಪದಂ
ಅಪ್ಪಮತ್ತಾ ನ ಮಿಾಯನ್ತಿ, ಯೇ ಪಮತ್ತಾ ಯಥಾಮತಾ

"ಅಪ್ರಮಾದವು ಅಮೃತಕ್ಕೆ ದಾರಿ, ಪ್ರಮಾದವು ಮೃತ್ಯುವಿಗೆ ದಾರಿ. ಅಪ್ರಮತ್ತರು ಸಾಯುವುದಿಲ್ಲ, ಪ್ರಮತ್ತರಾದವರು ಸತ್ತವರು ಹೇಗೋ ಹಾಗೆಯೇ."

ತುಮ್ಹೇಹಿ ಕಿಚ್ಚಂ ಆತಪ್ಪಂ, ಅಕ್ಖಾತಾರೋ ತಥಾಗತೊ

"ನೀವೇ ಪರಾಕ್ರಮದಿಂದ ಕೆಲಸ ಮಾಡಬೇಕು. ತಥಾಗತರು, (ಎಂದರೆ, ಹಿಂದಿನ ಋಷಿಗಳು ನಡೆದ ಮಾರ್ಗದಲ್ಲಿ ನಡೆದು ಬಂದವರು) ಹೀಗೆ ಮಾಡು ಎಂದು ಹೇಳುವವರು ಮಾತ್ರ."

ಇದೇ ಯಮರಾಜನು ನಚಿಕೇತಸಿಗೆ ಉಪದೇಶಿಸಿದ ಧರ್ಮ. ಇದೇ ಬುದ್ಧನು ಬಹುಜನಕ್ಕೆ, ಎಂದರೆ ಸಾಮಾನ್ಯಜನಕ್ಕೆ, ಉಪದೇಶಿಸಿದ ಧರ್ಮ.

೪

'ಧರ್ಮ'ವನ್ನು ಕುರಿತು ತೈತ್ತಿರೀಯ ಆರಣ್ಯಕದಲ್ಲಿ ಹೀಗೆ ಹೇಳಿದ್ದಾರೆ:

"ಧರ್ಮ ಇತಿ, ಧರ್ಮೇಣ ಸರ್ವಮಿದಂ ಪರಿಗೃಹೀತಂ, ಧರ್ಮಾನ್ನಾತಿದುಷ್ಕರಂ, ತಸ್ಮಾದ್ಧರ್ಮೇ ರಮನ್ತೇ । ಧರ್ಮೋ ವಿಶ್ವಸ್ಯ ಜಗತಃ

ಪ್ರತಿಷ್ಠಾ, ಲೋಕೇ ಧರ್ಮಿಷ್ಠಂ ಪ್ರಜಾ ಉಪಸರ್ಪನ್ತಿ,
ಧರ್ಮೇಣ ಪಾಪಮಪನುದತಿ, ಧರ್ಮೇ ಸರ್ವಂ ಪ್ರತಿಷ್ಠಿತಂ,
ತಸ್ಮಾದ್ಧರ್ಮಂ ಪರಮಂ ವದನ್ತಿ

"ಧರ್ಮವೆಂದರೆ: ಧರ್ಮದಿಂದ ಇದೆಲ್ಲವೂ ವಶವಾಗುತ್ತದೆ, ಧರ್ಮಕ್ಕಿಂತ ಮಾಡಲು ಅತಿ ಕಷ್ಟವಾದುದು ಇಲ್ಲ. ಆದ್ದರಿಂದ ಧರ್ಮದಲ್ಲಿ ರಮಿಸುತ್ತಾರೆ. ಧರ್ಮವು ಸರ್ವ ಜಗತ್ತಿಗೂ ಆಧಾರ. ಲೋಕದಲ್ಲಿ ಜನರು ಧರ್ಮಿಷ್ಠನ ಹತ್ತಿರ ಹೋಗುತ್ತಾರೆ, ಧರ್ಮದಿಂದ ಪಾಪವನ್ನು ಕಳೆಯುತ್ತಾರೆ. ಧರ್ಮದಲ್ಲಿ ಎಲ್ಲವೂ ಪ್ರತಿಷ್ಠಿತವಾಗಿದೆ. ಆದ್ದರಿಂದ ಧರ್ಮವನ್ನು ಪರಮವೆಂದು ಹೇಳುತ್ತಾರೆ."

ಇಂತಹ ಪರಮವೆನಿಸಿದ ಧರ್ಮವನ್ನು ಆದಿಯಲ್ಲಿ ಭಗವಂತನು ಸೂರ್ಯನಿಗೆ ಉಪದೇಶ ಮಾಡಿದನಂತೆ.

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಬ್ರವೀತ್
ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ

"ಈ ಅವ್ಯಯವಾದ ಯೋಗವನ್ನು ನಾನು ಸೂರ್ಯನಿಗೆ ಹೇಳಿದೆನು. ಸೂರ್ಯನು ಮನುವಿಗೆ ಹೇಳಿದನು. ಮನುವು ಇಕ್ಷ್ವಾಕುವಿಗೆ ಹೇಳಿದನು. ಹೀಗೆ ಪರಂಪರೆಯಿಂದ ಪ್ರಾಪ್ತವಾದ ಇದನ್ನು ರಾಜರ್ಷಿಗಳು ತಿಳಿದರು."

ಎಂದು ಕೃಷ್ಣನು ಗೀತೆಯಲ್ಲಿ ಅರ್ಜುನನಿಗೆ ಹೇಳಿದ್ದಾನೆ.

ಭಗವಂತನಾದ ಬುದ್ಧನಾದರೂ ಇದೇ ಸೂರ್ಯನ ಸಂತಾನದಲ್ಲಿ ಬಂದ ಮಹಾಯೋಗಿ. ಈತನ ತಂದೆ 'ಶುದ್ಧೋದನೋ ನಾಮ ನೃಪೋಽರ್ಕಬಂಧುಃ', ಶುದ್ಧೋದನನೆಂಬ ಹೆಸರಿನ ರಾಜ, ಸೂರ್ಯನ ಬಂಧು. ಇವನ ಮಗನಾದ ಬುದ್ಧನು 'ಆದಿಚ್ಚಾ ನಾಮ ಗೊತ್ತೇನ', ಆದಿತ್ಯ ಎಂಬ ಹೆಸರಿನ ಗೋತ್ರದಿಂದ ಪ್ರಸಿದ್ಧನಾದವನು. ಈತನು ಪ್ರವರ್ತನ ಮಾಡಿದ 'ಧರ್ಮಚಕ್ರ'ವಾದರೂ ಯಮನು ನಚಿಕೇತನಿಗೆ ಕೊಟ್ಟದ್ದೇ, ಭಗವಂತನು ಸೂರ್ಯನಿಗೆ ಹೇಳಿದ್ದೇ, ಶ್ರೀಕೃಷ್ಣನು ಅರ್ಜುನನಿಗೆ ತಿಳಿಸಿದ್ದೇ. ಇದೇ ಆದಿಯಿಂದ ಇಂದಿನವರೆಗೂ ವಿಚ್ಛಿತ್ತಿಯಿಲ್ಲದೆ ನಡೆದುಬಂದಿರುವ ಸನಾತನವಾದ 'ಧರ್ಮಚಕ್ರ'.

# ಧರ್ಮಚಕ್ರದ ಪರಿವಾರ

(ಆನೆ–ಗೂಳಿ–ಕುದುರೆ–ಸಿಂಹ)



ಈ ವಿಭಾಗಕ್ಕೆ ಜೋಡಿಸಿರುವ ಚಿತ್ರಗಳಲ್ಲಿ—

**ಆನೆ**—ಶಂಕಾಸ್ಯ ಎಂಬ ಸ್ಥಳದಲ್ಲಿನ ಅಶೋಕಸ್ತಂಭದ ತುದಿಯಿಂದ ತೆಗೆದದ್ದು. (ಮೂಲದಲ್ಲಿ ಆನೆಯ ಸೊಂಡಿಲು, ಬಾಲ ಒಡೆದುಹೋಗಿದೆ.)

**ಗೂಳಿ**—ರಾಂಪೂರ್ವ ಎಂಬ ಸ್ಥಳದಲ್ಲಿನ ಅಶೋಕ ಸ್ತಂಭದ ತುದಿಯಿಂದ ತೆಗೆದದ್ದು. (ಮೂಲದಲ್ಲಿ ಗೂಳಿಯ ಕೊಂಬು ಮುರಿದಿದೆ.)

**ಕುದುರೆ**—ಸಾರನಾಥದ ಅಶೋಕಸ್ತಂಭದ ಸಿಂಹ ಶೀರ್ಷದ ಶಿಲಾಪೀಠದಿಂದ ಪ್ರತಿಮಾಡಿದ್ದು.

**ಸಿಂಹ**—ರಾಂಪೂರ್ವ ಎಂಬ ಸ್ಥಳದಲ್ಲಿನ ಅಶೋಕ ಸ್ತಂಭದ ತುದಿಯಿಂದ ತೆಗೆದದ್ದು. (ಮೂಲದಲ್ಲಿ ಸಿಂಹದ ಮುಖ ಒಡೆದುಹೋಗಿ, ನೀಡಿದ ನಾಲಗೆ ಮಾತ್ರ ಉಳಿದಿದೆ.)

# ಧರ್ಮಚಕ್ರದ ಪರಿವಾರ

## ೧

ಅಶೋಕರಾಜನು ಅನೇಕ ಸ್ತೂಪಗಳನ್ನು ಕಟ್ಟಿಸಿದವನೆಂದೂ ಕಲ್ಲುಬಂಡೆಗಳ ಮೇಲೆಯೂ ಕಲ್ಲುಕಂಬಗಳ ಮೇಲೆಯೂ ಅನೇಕ ಶಾಸನಗಳನ್ನು ಕಡೆಯಿಸಿದವನೆಂದೂ ವಿವಿಧವಾದ ಮತಗಳ ಸಂನ್ಯಾಸಿಗಳ ವಾಸಕ್ಕಾಗಿ ಅನೇಕ ಗುಹಾವಾಸಗಳನ್ನು ಮಾಡಿಸಿದವನೆಂದೂ ಪ್ರಸಿದ್ಧನಾದವನು. ಅಶೋಕನ ಈ ವಿವಿಧವಾದ ವಾಸ್ತುರಚನೆಗಳಲ್ಲಿ ಆತನ ಕಂಬಗಳು ನಮಗೆ ಈಗ ಪ್ರಕೃತ.

ಕ್ರಿ. ಪೂ. ೩ನೇ ಶತಮಾನದಲ್ಲಿ ಅಶೋಕನು ನೆಡಿಸಿದ ಅನೇಕ ಸ್ಮಾರಕಶಿಲಾಸ್ತಂಭಗಳಲ್ಲಿ ಫಾಹಿಯಾನನು (ಕ್ರಿ.ಶ. ೫ನೇ ಶತಮಾನದಲ್ಲಿ ಭಾರತಕ್ಕೆ ಬಂದಿದ್ದ ಚೀನಾ ಪ್ರವಾಸಿ) ತಾನು ಕಂಡ ಆರು ಕಂಬಗಳನ್ನು ವರ್ಣಿಸಿದ್ದಾನೆ; ಹುಯೆನ್‌ತ್ಸಾಂಗ್ (ಕ್ರಿ. ಶ. ೭ನೇ ಶತಮಾನದಲ್ಲಿ ಬಂದ ಇನ್ನೊಬ್ಬ ಚೀನಾಪ್ರವಾಸಿ) ತಾನು ಕಂಡ ಹದಿನೈದು ಕಂಬಗಳನ್ನು ವರ್ಣಿಸಿದ್ದಾನೆ.



ಆ ಕಂಬಗಳ ಗಾತ್ರ, ಎತ್ತರ ಮೆರುಗು ಬೇರೆಬೇರೆಯಾಗಿದ್ದ ಹಾಗೆಯೇ ಅವುಗಳ ತುದಿಯ ಅಲಂಕಾರಗಳೂ ಬೇರೆಬೇರೆಯಾಗಿದ್ದುವು. ಉದಾಹರಣೆಗೆ ಶ್ರಾವಸ್ತಿಯ ಜೇತವನ ವಿಹಾರದ ಮಹಾದ್ವಾರದ ಎರಡೂ

ಕಡೆ ಇದ್ದ ಎರಡು ಕಂಬಗಳಲ್ಲಿ ಒಂದರ ಮೇಲೆ ಚಕ್ರ, ಇನ್ನೊಂದರ ಮೇಲೆ ವೃಷಭ ಇತ್ತಂತೆ. ಶಂಕಾಸ್ಯದ ಕಂಬದ ಮೇಲೆ ಸಿಂಹ; ಪಾಟಲೀಪುರದ ಕಂಬದ ಮೇಲೆ, ಕಪಿಲವಸ್ತುವಿನ ಕಂಬದ ಮೇಲೆ ಸಿಂಹ; ಲುಂಬಿನೀವನದ ಕಂಬದ ಮೇಲೆ ಕುದುರೆ; ವೈಶಾಲಿ, ಮುಹಾಶಾಲಾ, ಲೌರಿಯಾ ನಂದನಘುರ್, ರಾಂಪೂರ್ವ, ಈ ಸ್ಥಳದ ಕಂಬಗಳ ತುದಿಗೆ ಸಿಂಹ; ಶಂಕಾಸ್ಯದ ಕಂಬದ ತುದಿಗೆ ಆನೆ; ರಾಂಪೂರ್ವದಲ್ಲಿ ಗೂಳಿ; ರಾಜಗೃಹದಲ್ಲಿ ಆನೆ—ಈ ರೀತಿಯ ಅಲಂಕಾರಗಳಿದ್ದುವಂತೆ. ಆ ಎಲ್ಲಾ ಕಂಬಗಳೂ ಅವುಗಳ ತುದಿಯ ಅಲಂಕಾರಗಳೂ ಈಗ ಸಿಕ್ಕಿಲ್ಲದಿದ್ದರೂ, ಅವುಗಳಲ್ಲಿ ಬಹುಪಾಲು ದೊರಕಿವೆ.

ಈಗ ದೊರಕಿರುವ ಕಂಬದ ಶೀರ್ಷಗಳನ್ನು ಪರಿಶೀಲಿಸಿದರೆ—**ಚಕ್ರ, ಸಿಂಹ, ಗೂಳಿ, ಆನೆ, ಕುದುರೆ**ಗಳಿಗೆ ಏನೋ ಪ್ರಾಶಸ್ತ್ಯ ಕೊಟ್ಟಿರುವುದು ಗೋಚರವಾಗುತ್ತದೆ. ಚಕ್ರಕ್ಕಂತೂ ಧರ್ಮಚಕ್ರವೆಂದು ಅಗ್ರಪೂಜೆ. ಉಳಿದ ನಾಲ್ಕು ಚಿಹ್ನಗಳಲ್ಲಿ ಸಿಂಹವನ್ನು ಮೇಲಿಂದ ಮೇಲೆ ಎತ್ತಿಕೊಂಡಿದ್ದಾರೆ; ಕೆಲವು ಕಡೆ ಹೊಂಚಿ ಕುಳಿತ ಒಂಟಿ ಸಿಂಹ, ಇನ್ನು ಕೆಲವು ಕಡೆ (ಸಾಂಚಿ ಮತ್ತು ಸಾರನಾಥ) ಬೆನ್ನಿಗೆ



ಬೆನ್ನು ಕೊಟ್ಟ ನಾಲ್ಕು ಸಿಂಹ. ಸಿಂಹದ ಬಳಿಕ ಆನೆ ಅಶೋಕನಿಗೆ ಪ್ರಿಯವಾಗಿತ್ತೆಂದು ತೋರುತ್ತದೆ. ಕೆಲವು ಕಂಬಗಳ ತುದಿಗೆ ಆನೆಯ ಮೂರ್ತಿಯನ್ನು ಅಳವಡಿಸಿದ್ದು ಮಾತ್ರವಲ್ಲದೆ, ತಾನು ಧೌಲಿ ಮತ್ತು ಕಾಲ್ಸಿ ಎಂಬ ಕಡೆ ಬಂಡೆಯ ಮೇಲೆ ಕೆತ್ತಿಸಿದ ಶಾಸನದ ಅಡಿಯಲ್ಲಿ ಆನೆಯ ಚಿತ್ರವನ್ನು ಕೊರೆಯಿಸಿ, ಅಲ್ಲಿ 'ಗಜತಮೆ' ಎಂದು ಬರೆಯಿಸಿದ್ದಾನೆ; ಅದರ ಹಾಗೆಯೆ ಗಿರಿನಾರ್ ಶಾಸನದ ಕೊನೆಯಲ್ಲಿ '(ಸ)ರ್ವಶ್ವೇತೋ ಹಸ್ತಿ ಸರ್ವಲೋಕಸುಖಾಹರೊ ನಾಮ' (ಎಲ್ಲಾ ಲೋಕಕ್ಕೂ ಸುಖವನ್ನು ತರತಕ್ಕುದು ಎಂಬ ತುಂಬ ಬಿಳುಪಾದ ಆನೆ) ಎಂದು ಬರೆಸಿದ್ದಾನೆ. ಈ ಸಿಂಹ ಆನೆಗಳ ಹಾಗೆಯೇ ಗೂಳಿ ಕುದುರೆ ಇವುಗಳ ಚಿಹ್ನೆಯಾದರೂ ಬುದ್ಧನ ಹೆಸರನ್ನು ಕಣ್ಣಿಗೆ ಹೇಳುವ ಚಿತ್ರಲಿಪಿ.



೨

ಸಾರನಾಥದಲ್ಲಿನ ಶಿಲಾಸ್ತಂಭದ ಸಿಂಹಶೀರ್ಷದ ಶಿಲಾಪೀಠದಲ್ಲಿ ಅಶೋಕನು ಈ ನಾಲ್ಕು ಪ್ರಾಣಿಗಳನ್ನೂ ಚಕ್ರದ ಪರಿವಾರವಾಗಿ ಚಿತ್ರಿಸಿರುವನೆಂದು ಹಿಂದೆ ಹೇಳಿತು. ಈ ನಾಲ್ಕು ಪ್ರಾಣಿಗಳೂ ಕ್ರಮವಾಗಿ ಬುದ್ಧನ ಸ್ವರ್ಗಾವತರಣ, ಜನನ, ಮಹಾಭಿನಿಷ್ಕ್ರಮಣ ಮತ್ತು ಧರ್ಮದೇಶನ ಎಂಬ ನಾಲ್ಕು ಮಹಾಕ್ರಿಯೆಗಳ ಸಂಕೇತವೆಂದೂ ಅಲ್ಲಿಯೇ ಹೇಳಿತು. ಬೌದ್ಧಸಾಹಿತ್ಯದಲ್ಲಂತೂ ಬುದ್ಧನನ್ನು ವರ್ಣಿಸುವಾಗ ಏನಾದರೂ ಉಪಮಾನ ಕೊಡಬೇಕಾದರೆ ಈ ನಾಲ್ಕು ಪ್ರಾಣಿಗಳನ್ನು ಎತ್ತಿಕೊಂಡು ಹೇಳುವುದು ತೀರ ಸಾಮಾನ್ಯ.

ಮುಂದೆ ಬುದ್ಧನಾಗುವ ಸಿದ್ಧಾರ್ಥನು ಜನ್ಮತಾಳಿದ ಕಾಲದಲ್ಲಿ ಅಸಿತನೆಂಬ ಋಷಿ ಕಪಿಲವಸ್ತುವಿಗೆ ಬಂದು, ಮಗುವನ್ನು ಕಂಡು, ಈ ರೀತಿಯಾಗಿ ಕೀರ್ತಿಸಿದನಂತೆ:

ಸೊ ಸಬ್ಬಸತ್ತುತ್ತಮೊ ಅಗ್ಗಪುಗ್ಗಲೊ
ನರಾಸಭೊ ಸಬ್ಬಪಜಾನಮುತ್ತಮೊ
ವತ್ತೆಸ್ಸತಿ ಚಕ್ಕಂ ಇಸಿವ್ಹಯೆ ವನೆ
ನದಂ ವ ಸೀಹೊ ಬಲವಾ ಮಿಗಾಧಿಭೂ

"ಸರ್ವಸತ್ತ್ವಗಳಲ್ಲಿ ಉತ್ತಮನಾದ, ಪುದ್ಗಲಗಳಲ್ಲಿ ಅಗ್ರನಾದ, **ನರವೃಷಭ**ನಾದ, ಸರ್ವ ಪ್ರಜೆಗಳಲ್ಲಿ ಉತ್ತಮನಾದ ಅವನು ಮೃಗಾಧಿಪತಿಯಾದ ಬಲವಾನ್ **ಸಿಂಹ**ದಂತೆ ಧ್ವನಿಮಾಡುತ್ತಾ ಋಷ್ಯಾಹ್ವಯವನದಲ್ಲಿ ಚಕ್ರವನ್ನು ವರ್ತಿಸುತ್ತಾನೆ."

ಗೃಹತ್ಯಾಗಮಾಡಿದ ಗೌತಮನು ರಾಜಗೃಹಕ್ಕೆ ಬಂದು, ಅಲ್ಲಿನ ಪಾಂಡವ ಪರ್ವತವನ್ನು ಏರಿಹೋಗಿ ಕುಳಿತಾಗ—'ನಿಸಿನ್ನೋ ವ್ಯಘ್ಘುಸಭೋ ವ ಸೀಹೋ ವ ಗಿರಿಗಬ್ಭರೇ'—ಗಿರಿಯ ಗಹ್ವರದಲ್ಲಿ **ವ್ಯಾಘ್ರ**ದಂತೆ, **ವೃಷಭ**ದಂತೆ, **ಸಿಂಹ**ದಂತೆ ಕುಳಿತಿದ್ದನಂತೆ.

ಇನ್ನೊಂದು ಸಲ ಭಗವಂತನು ತನ್ನ ಉತ್ತರೀಯವನ್ನು ಹರಡಿ, ಮಲಗಿದ ನಂತೆ. ಹೇಗೆ ಮಲಗಿದನಂತೆ! 'ಸೀಹೋ ಸೇಲಗುಹಾಯಂ ವ ಪಹೀನಭಯ ಭೇರವೊ'! ಸಿಂಹವು ಶೈಲದ ಗುಹೆಯಲ್ಲಿ ಭಯಭೈರವಗಳಿಲ್ಲದೆ ಹೇಗೆ ಮಲಗು ವುದೋ ಹಾಗೆ ಮಲಗಿದನಂತೆ!

ಬುದ್ಧನ ಕೀರ್ತಿಯನ್ನು ಕೇಳಿ ಅವನ ದರ್ಶನಕ್ಕೆಂದು ಬಂದು, ಅವನನ್ನು ಕಣ್ಣಾರೆ ಕಂಡವರು "ನಾಗೋ ವತ ಭೋ ಸಮಣೋ ಗೋತಮೊ! ಸೀಹೋ ವತ ಭೋ ಸಮಣೊ ಗೋತಮೊ! ಆಜಾನೀಯೊ ವತ ಭೊ ಸಮಣೊ ಗೋತಮೊ! ಉಸಭೊ ವತ ಭೋ ಸಮಣೊ ಗೋತಮೊ! ಧೋರಯ್ಹೋ ವತ ಭೋ ಸಮಣೊ ಗೋತಮೊ! ದಂತೋ ವತ ಭೋ ಸಮಣೋ ಗೋತಮೊ!" ಎಂದು ಹೇಳುತ್ತಿದ್ದ ರಂತೆ! "ಆಹಾ! ಶ್ರಮಣ ಗೌತಮನು **ಆನೆ**ಯೇ ಸರಿ! **ಸಿಂಹ**ವೇ ಸರಿ! **ಜಾತ್ಯಶ್ವ**ವೇ ಸರಿ! **ವೃಷಭ**ವೇ ಸರಿ! ಧುರಂಧರನೇ ಸರಿ! ದಾಂತನೇ ಸರಿ!" ಎನ್ನುತ್ತಿದ್ದರಂತೆ!

೩

ಬೌದ್ಧಸಾಹಿತ್ಯದಲ್ಲಿ 'ಜಾತಕ' ಎಂಬ ಒಂದು ಗ್ರಂಥವಿದೆ. ಇದರಲ್ಲಿ ಐನೂರಕ್ಕೆ ಮೇಲ್ಪಟ್ಟು ಕಥೆಗಳಿವೆ. ಈ ಕಥೆಗಳೆಲ್ಲಾ ಬುದ್ಧನ ಪೂರ್ವಜನ್ಮದ ಕಥೆಗಳು ಎಂದು ಬೌದ್ಧರ ನಂಬಿಕೆ. ಈ ಕಥೆಗಳ ಪ್ರಕಾರ—ಬುದ್ಧನು ತನ್ನ ಹಿಂದಿನ ಜನ್ಮಗಳಲ್ಲಿ

ಅನೇಕ ಸಲ ಮನುಷ್ಯನಾಗಿ, ಅನೇಕ ಸಲ ಮೃಗವಾಗಿ, ಅನೇಕ ಸಲ ದೇವತೆಯಾಗಿ ಜನ್ಮ ತಾಳಿದ್ದನಂತೆ. ಹೀಗೆ ತಾಳಿದ್ದ ಜನ್ಮಗಳಲ್ಲಿ ಏಳು ಸಲ **ಆನೆ**ಯಾಗಿ, ನಾಲ್ಕು ಸಲ **ವೃಷಭ**ವಾಗಿ, ನಾಲ್ಕು ಸಲ **ಜಾತ್ಯಶ್ವ**ವಾಗಿ, ಹತ್ತು ಸಲ **ಸಿಂಹ**ವಾಗಿ ಹುಟ್ಟಿದ್ದನಂತೆ. ಪ್ರತಿಯೊಂದು ಹುಟ್ಟಿನಲ್ಲಿಯೂ ತಾನು ಮುಂದೆ ಬುದ್ಧನಾಗುವುದಕ್ಕೆ ಬೇಕಾದ ಶೀಲಸಂಪತ್ತಿಯನ್ನು ಬೆಳೆಸಿಕೊಳ್ಳುತ್ತಿದ್ದನಂತೆ.

ಬೋಧಿಸತ್ತ್ವನು (ಎಂದರೆ, ಬುದ್ಧನು, ತನ್ನ ಹಿಂದಿನ ಜನ್ಮದಲ್ಲಿ) ಒಮ್ಮೆ ಆನೆಯಾಗಿದ್ದಾಗ, ದರಿದ್ರನೊಬ್ಬನ ಮೇಲಿನ ಕರುಣೆಯಿಂದ, ಅವನ ದಾರಿದ್ರ್ಯವನ್ನು ನೀಗುವುದಕ್ಕಾಗಿ ತಾನೇ ತನ್ನ ಕೊಂಬುಗಳನ್ನು ಕಿತ್ತು ದಾನಮಾಡಿದನು. ಆಗ ಆತನಿಗೆ 'ಶೀಲವನಾಗ' ಎಂದರೆ ಶೀಲವಂತವಾದ ಆನೆ ಎಂದು ಹೆಸರಿತ್ತು. ಇನ್ನೊಂದು ಸಲ 'ಷಡ್ದಂತ'ವೆಂಬ ಆರುಕೊಂಬಿನ ಆನೆಯಾಗಿ ಹುಟ್ಟಿದ್ದಾಗ, ತನ್ನ ಬಣ್ಣಬಣ್ಣದ ಆರು ಕೊಂಬುಗಳನ್ನೂ ಮನಃಪೂರ್ವಕವಾಗಿ ದಾನಕೊಡಲು ಒಪ್ಪಿದುದಲ್ಲದೆ, ಆ ಕೊಂಬುಗಳನ್ನು ಗರಗಸದಿಂದ ಕುಯ್ಯಲು ತಾನೇ ತನ್ನ ಸೊಂಡಿಲಿನಿಂದ ಸಹಾಯ ಮಾಡಿದನು. ಇನ್ನೊಂದು ಸಲ ಒಂದು ಸಣ್ಣ ಗುಬ್ಬಿ ತನ್ನ ಆಶ್ರಯವನ್ನು ಬೇಡಿದರೆ, ಅದು ಸಣ್ಣದೆಂದು ಅದನ್ನು ಅಲಕ್ಷ್ಯಮಾಡದೆ, ಅದನ್ನೂ ಅದರ ಮೊಟ್ಟೆಗಳನ್ನೂ ತನ್ನ ಹಿಂಡು ತುಳಿದುಹಾಕದಂತೆ ಕಾಪಾಡಿಕೊಟ್ಟಿತು. ಮತ್ತೊಂದು ಸಲ 'ಮಾತೃಪೋಷಕ' ಎಂಬ ಆನೆಯಾಗಿ ಹುಟ್ಟಿ, ತಾಯಿಯ ಪೋಷಣೆಯೇ ತನ್ನ ಬದುಕಿನ ಸರ್ವಧ್ಯೇಯವಾಗಿ ಬದುಕಿ, ಮರಣಾನಂತರ ಮರುಹುಟ್ಟಿಗೆ ಹೋದನು.

ಗೂಳಿಯಾಗಿ ಹುಟ್ಟಿದಾಗಲೂ ಹೀಗೆಯೇ. 'ನಂದಿವಿಶಾಲ' ಎಂಬ ಗೂಳಿಯಾಗಿದ್ದಾಗ ಬಲಾತ್ಕಾರದಿಂದ, ಒರಟು ಮಾತುಗಳಿಂದ ಅದನ್ನು ನಡಸುವುದು ಯಾರ ಕೈಲೂ ಸಾಧ್ಯವಾಗುತ್ತಿರಲಿಲ್ಲ; ಆದರೆ ನಯವಾದ ಮಾತುಗಳನ್ನಾಡಿದರೆ, ಹೇಳಿದ ಕೆಲಸವನ್ನು ಶಕ್ತಿಮೀರಿ ನಡೆಸಿಕೊಡುತ್ತಿದ್ದನು. ಇನ್ನೊಂದು ಸಲ 'ಕೃಷ್ಣ' ಎಂಬ ಗೂಳಿಯಾಗಿದ್ದಾಗ, ಚಿಕ್ಕಂದಿನಲ್ಲಿ ತನ್ನನ್ನು ಸಾಕಿ ಬೆಳೆಸಿದ ಮುದುಕಿಗೆ ಸಂಪಾದಿಸಲು ಶಕ್ತಿಸಾಲದೆ ಹೋದಾಗ, ತಾನು ಹೋಗಿ ಗಾಡಿಗಳನ್ನು ಎಳೆದು, ಕೂಲಿಯನ್ನು ಸಂಪಾದನೆಮಾಡಿಕೊಂಡು ತಂದು ಅವಳಿಗೆ ಕೊಟ್ಟನು. ಇನ್ನೊಂದೆರಡು ಸಲ ತಾನು ಗೂಳಿಯಾಗಿ ಹುಟ್ಟಿದಾಗ ಪಕ್ಕದ ಹಂದಿಗೆ ತಿನ್ನಿಸುತ್ತಿದ್ದ ಅಮಿತಾ

ಹಾರವನ್ನು ಕಂಡರೂ ಅಸೂಯೆಪಡದೆ, ಅದನ್ನು ಅಪೇಕ್ಷಿಸದೆ, ತನಗೆ ದೊರೆತ ಮಿತಾಹಾರದಲ್ಲಿಯೇ ತೃಪ್ತಿಪಟ್ಟು, ದೀರ್ಘಾಯುಸ್ಸಿನಿಂದ ಬಾಳಿ, ಪುಣ್ಯವನ್ನು ಸಂಪಾದಿಸಿದನು.

ಅದರಂತೆಯೇ ಬೋಧಿಸತ್ತ್ವನು ತಾನು ಕುದುರೆಯಾಗಿ ಹುಟ್ಟಿದ ಕಾಲದಲ್ಲಿ ಯುದ್ಧಭೂಮಿಗೆ ತನ್ನ ರಾಜನನ್ನು ಹೊತ್ತುಹೋಗಿ, ತನಗೆ ಎಷ್ಟು ಶಸ್ತ್ರಾಸ್ತ್ರಗಳಿಂದ ಗಾಯವಾದರೂ ಹಿಮ್ಮೆಟ್ಟದೆ, ಅರಸನಿಗೆ ಜಯವನ್ನು ಸಂಪಾದಿಸಿಕೊಟ್ಟು, ತನ್ನ ಅನ್ನದ ಋಣವನ್ನು ತೀರಿಸಿ ಬದುಕನ್ನು ಮುಗಿಸಿದನು.

ಹೀಗೆಯೇ ಸಿಂಹವಾಗಿ ಹುಟ್ಟಿದ ಕಾಲದಲ್ಲಿ—ಒಂದು ಸಲ ತನ್ನ ತಂಗಿಯನ್ನು ಕಾಮಿಸಿ ಬಂದ ಒಂದು ಸೃಗಾಲವನ್ನು ಉಪಾಯದಿಂದಲೇ ಹೆದರಿಸಿ ಕೊಂದನು; ಇನ್ನೊಂದು ಸಲ ತನ್ನನ್ನು ಸೋಲಿಸುವುದಕ್ಕಾಗಿ ತಿಪ್ಪೆಯಲ್ಲಿ ಹೊರಳಿ ಬಂದ ಒಂದು ದುಷ್ಟಹಂದಿಯನ್ನು ಮುಟ್ಟಲು ಹೇಸಿ, ಅದನ್ನು ಜೀವದೊರಸೆ ಬಿಟ್ಟು, ತನ್ನ ನೈರ್ಮಲ್ಯವನ್ನು ರಕ್ಷಿಸಿಕೊಂಡನು; ಮತ್ತೊಂದು ಸಲ ತಾನು ಬೇಟೆಯಾಡಹೋಗಿ, ಕೆಸರಿನಲ್ಲಿ ಸಿಕ್ಕಿಬಿದ್ದಾಗ ತನ್ನನ್ನು ಉದ್ಧಾರಮಾಡಿದ ಒಂದು ಸೃಗಾಲದೊಡನೆ ಗಾಢವಾದ ಸ್ನೇಹವನ್ನು ಬೆಳಸಿ, ಆ ಕೃತಜ್ಞತೆಯ ಸೂಚಕವಾಗಿ ತಾನು ಬದುಕಿರುವವರೆಗೂ ತಾನು ತಂದ ಮಾಂಸದಲ್ಲಿ ಅದಕ್ಕೂ ಪಾಲು ಕೊಡುತ್ತಿದ್ದನು; ಮತ್ತೊಂದು ಸಲ ಪೂರ್ವಾಪರಜ್ಞಾನವಿಲ್ಲದೆ ಭಯದಿಂದ ದಿಕ್ಕುಕೆಟ್ಟು ಪಶ್ಚಿಮಸಮುದ್ರಕ್ಕೆ ಹೋಗಿ ಬೀಳುತ್ತಿದ್ದ ಪ್ರಾಣಿಗಳನ್ನು ತಡೆದು, ತನ್ನ ವಿವೇಕದಿಂದ ಅವುಗಳ ಭೀತಿಗೆ ಕಾರಣವೇನೆಂದು ತಿಳಿದು, ಅವುಗಳಿಗೆ ಧೈರ್ಯ ಹೇಳಿ ಅವಕ್ಕೆ ಜೀವದಾನ ಮಾಡಿದನು.

೪

ಹೀಗೆ 'ಜಾತಕ'ಗಳಲ್ಲಿ ಕಥಾರೂಪದಿಂದ ಕೀರ್ತನೆಮಾಡಿರುವ ಈ ನಾಲ್ಕು ಪ್ರಾಣಿಗಳ ಕೆಲವು ವಿಶೇಷ ಗುಣಗಳನ್ನು ಬೌದ್ಧಗ್ರಂಥಗಳು ಮೇಲಿಂದ ಮೇಲೆ ಎತ್ತಿ ಕೊಂಡಾಡುತ್ತವೆ.

ಆನೆಯು ಯುದ್ಧದಲ್ಲಿ ಮೈಮೇಲೆ ಬಿದ್ದ ಬಾಣಗಳನ್ನು ಸಹಿಸಿಕೊಂಡು ಮುಂದುವರಿಯುವಂತೆ ಕೆಟ್ಟನಡತೆಯವರು ಮೇರೆ ಮೀರಿ ಮಾತನಾಡಿದರೆ ಅದನ್ನು ಸಹಿಸಿಕೊಳ್ಳಬೇಕು . . . ಧನಪಾಲಕನೆಂಬ ಆನೆ, ಮದಜಲಸುರಿಸುತ್ತ ದುರ್ನಿವಾರ್ಯ

ವಾದುದು, ಕಟ್ಟಿಹಾಕಿದರೆ ಕವಳ ತಿನ್ನುವುದಿಲ್ಲ. ತಾನು ಬಿಟ್ಟುಬಂದ ನಾಗವನವನ್ನು ಸ್ಮರಿಸುತ್ತದೆ . . . ಕೆಸರಿನಲ್ಲಿ ಹೂತುಹೋದ ಆನೆ ತನ್ನ ಪ್ರಯತ್ನದಿಂದಲೇ ಮೇಲೆದ್ದು ಬರುವಂತೆ ನೀನೇ ನಿನ್ನನ್ನು ದುರ್ಗದಿಂದ ಉದ್ಧರಿಸಿಕೊಳ್ಳಬೇಕು . . . ಕಾಡಿನಲ್ಲಿ ಸಲಗ ಹೇಗೋ ಹಾಗೆ ಒಂಟಿಯಾಗಿ ಮುಂದೆ ನಡೆ . . . ನಡೆದಾಡುವ ಪ್ರಾಣಿಗಳು ಯಾವ ಯಾವುವುಂಟೋ ಆ ಎಲ್ಲದರ ಹೆಜ್ಜೆಗುರುತುಗಳೂ ಆನೆಯ ಹೆಜ್ಜೆಗುರುತಿನಲ್ಲಿ ಅಡಕವಾಗುತ್ತವೆ. ಈ ಒಂದು ಮಹತ್ತ್ವದ ಕಾರಣದಿಂದ ಆನೆಯ ಹೆಜ್ಜೆಯನ್ನು ಹೆಜ್ಜೆಗಳಲ್ಲೆಲ್ಲಾ ಅಗ್ರವೆಂದು ಹೇಳುತ್ತಾರೆ . . .

ಗೂಳಿ ಭಾರವನ್ನು ಲೀಲೆಯಿಂದ ಹೊರುತ್ತದೆ. ಎಡವಿದರೂ ಬೇಗ ಎದ್ದೇಳುತ್ತದೆ, ಪುನಃ ಉತ್ಸಾಹಗೊಳ್ಳುತ್ತದೆ. ದೈನ್ಯವಿಲ್ಲದೆ ಭಾರವನ್ನು ಹೊರುತ್ತದೆ . . .

ಜಾತ್ಯಶ್ವವು ಕಶೆಗೆ ಹೆದರಿ ನೇರವಾಗಿ ಹೋಗುವಂತೆ ಲಜ್ಜೆಯುಳ್ಳವನು ನಿಂದೆಗೆ ಹೆದರಿ ಸರಿಯಾಗಿ ನಡೆಯಬೇಕು . . . ಕಶೆ ತಾಗಿದ ಭದ್ರಾಶ್ವ ಹೇಗೋ ಹಾಗೆ ಉತ್ತೇಜಿತರಾಗಿ ವೇಗದಿಂದ ಮುಂದೆ ಹೋಗಿರಿ . . . ಆರ್ಜವ, ಜವ, ಸಹನೆ, ವಿಧೇಯತೆ, ಮಾರ್ದವ ಇವು ಜಾತ್ಯಶ್ವದ ಗುಣಸಂಪತ್ತಿ . . .

ಸಿಂಹವು ಸಂಧ್ಯೆಯ ಸಕಾಲದವರೆಗೂ ಗುಹೆಯಿಂದ ಹೊರಗೆ ಬರುವುದಿಲ್ಲ. ಬೇಟೆಯ ಕಾಲ ಸಮೀಪಿಸಿದಾಗ ಎಚ್ಚತ್ತು, ಎದ್ದು, ಮೈನೀಡಿ ಆಲಸ್ಯವನ್ನು ಕೊಡವಿಕೊಂಡು, ನಾಲ್ಕು ದಿಕ್ಕುಗಳನ್ನೂ ನಿಟ್ಟಿಸುತ್ತದೆ. ತನ್ನ ದಾರಿಗೆ ಸಣ್ಣ ಪ್ರಾಣಿಗಳು ಅರಿಯದೆ ಅಡ್ಡವಾಗಿ ಬಂದು ನಾಶವಾಗದಿರಲೆಂದು ಒಂದು ದೊಡ್ಡ ಸಿಂಹನಾದ ಮಾಡುತ್ತದೆ. ಆ ಬಳಿಕವೇ ಗುಹೆಯಿಂದ ಹೊರಗೆ ಬಂದು, ತನ್ನ ಆಹಾರವನ್ನು ಸಂಪಾದಿಸುತ್ತದೆ . . . ಪಂಡಿತನಾದವನು ಸಿಂಹದಂತೆ ಭಯಭೀತಿಗಳಿಲ್ಲದವನಾಗಿ ಏಕಾಕಿಯಾಗಿ ಮುಂದುವರಿಯಬೇಕು . . . ತಿರ್ಯಕ್ ಎನ್ನಿಸಿದ ಪ್ರಾಣಿಗಳಲ್ಲೆಲ್ಲಾ ಮೃಗರಾಜನಾದ ಸಿಂಹವನ್ನು ಅಗ್ರವೆನ್ನುತ್ತಾರೆ. ಅದರ ಸ್ಥಾಮ, ಅದರ ಜವ, ಅದರ ಶೌರ್ಯ ಬೇರೆ ಯಾವುದಕ್ಕೂ ಇಲ್ಲ.

* * * *

ಹೀಗೆ, ಬುದ್ಧನ ಪ್ರಭಾವದಿಂದ ಉದ್ಧಾರನಾದ ಅಶೋಕನು ಎತ್ತಿಸಿದ ಶಿಲಾ ಶಿಲ್ಪಗಳಲ್ಲಿ ಚಕ್ರವೆಂದರೆ ಹೇಗೆ ಧರ್ಮವೆಂದು ಸಂಕೇತವೋ ಹಾಗೆಯೇ ಈ ಆನೆ,

ಹೋರಿ, **ಕುದುರೆ,** **ಸಿಂಹ** ಎಂಬ ನಾಲ್ಕು ಪ್ರಾಣಿಗಳಿಗೂ 'ಧರ್ಮವನ್ನು ಆಚರಿಸಿ ಉದಾತ್ತವಾದ ಗುಣಗಳನ್ನು ಸಂಪಾದಿಸಿದ ಮಹಾಪುರುಷ' ಎಂದು ಅರ್ಥ. ಕೆಲವು ಸಲ ಈ ಚಿಹ್ನೆಗಳಿಗೆ 'ಪುರುಷೋತ್ತಮನಾದ ಬುದ್ಧ' ಎಂದೂ ಅರ್ಥವಾಗುತ್ತದೆ.

# ದೇವಾನಾಂಪ್ರಿಯ, ಪ್ರಿಯದರ್ಶಿ

(ಎನ್ನಿಸಿದ ರಾಜಾ ಅಶೋಕ)



ಅಶೋಕನದು ಎಂದೆಂಬ ಪ್ರತಿಕೃತಿ ಸಾಂಚೀಸ್ತೂಪದ ಒಂದು ಅಲಂಕಾರದಲ್ಲಿ ಇದೆಯಂತೆ. ಅಚ್ಚಾಗಿರುವ ಚಿತ್ರಗಳಲ್ಲಿ ಅದರ ವಿವರ ಸ್ಪಷ್ಟವಾಗಿಲ್ಲ.

ಹಿಂದಿನ ಪುಟದಲ್ಲಿ ಕೊಟ್ಟಿರುವ ಚಿತ್ರ ಒಂದು ಗಾಂಧಾರದ ಶಿಲ್ಪದಿಂದ ಎತ್ತಿಕೊಂಡದ್ದು. ಅದರಲ್ಲಿ, ಗುಹೆಯಲ್ಲಿ ಕುಳಿತಿರುವ ಬುದ್ಧನ ಬಳಿಗೆ ದೇವರಾಜನಾದ ಶಕ್ರನು ತನ್ನ ಪರಿವಾರದೊಡನೆ ಬರುವ ಕಲ್ಪನೆಯಿದೆ. ಹಿಂದಿನ ಕಾಲದ ವೇಷಭೂಷಣಗಳನ್ನು ತೋರಿಸುವ ಆ ಅದನ್ನೇ ಅಶೋಕನದರ ಬದಲಾಗಿ ಎತ್ತಿಕೊಂಡು, ಆತನು ಧರ್ಮಚಕ್ರಕ್ಕೆ ಕೈ ಮುಗಿಯುತ್ತಿರುವಂತೆ ಇಲ್ಲಿ ತೋರಿಸಲಾಗಿದೆ.

# ದೇವಾನಾಂಪ್ರಿಯ, ಪ್ರಿಯದರ್ಶಿ

೧

ಧರ್ಮ ಒಳ್ಳೆಯದು.

ಧರ್ಮ ಎಂದರೆ ಯಾವುದು? ಅಲ್ಪ ಆಸ್ರವ, ಬಹುಕಲ್ಯಾಣ, ದಯೆ, ದಾನ, ಸತ್ಯ ಮತ್ತು ಶೌಚ—ಇದು **ಧರ್ಮ.**

ದಯೆ, ದಾನ, ಸತ್ಯ, ಶೌಚ, ಮಾರ್ದವ, ಸಾಧುತ್ವಗಳು ಲೋಕದಲ್ಲಿ ವೃದ್ಧಿಯಾಗುವುದೇ **ಧರ್ಮಕಾರ್ಯ, ಧರ್ಮಾಚರಣೆ.** ಶೀಲವಿಲ್ಲದವನಿಗೆ ಧರ್ಮವನ್ನು ಆಚರಿಸಲಾಗುವುದಿಲ್ಲ.

*　　　*　　　*　　　*　　　*

**ಕಲ್ಯಾಣ**ವನ್ನು ಮಾಡುವುದು ಕಷ್ಟ. ಕಲ್ಯಾಣವನ್ನು ಆರಂಭಿಸಿದವನು ಕಷ್ಟವಾದುದನ್ನು ಮಾಡುವನು. ಇದರಲ್ಲಿ ಒಂದು ಚೂರನ್ನಾದರೂ ಮರೆತವನು ಕೆಟ್ಟ ಕೆಲಸ ಮಾಡುವನು. ಪಾಪ ಮಾಡುವುದು ಸುಲಭ. ಪಾಪವೆಂಬುದು ಸುಲಭವಾಗಿ ಹೆಜ್ಜೆಯಿಡುತ್ತದೆ.

'ಈ ಕಲ್ಯಾಣ ನನ್ನಿಂದ ಆಯಿತು' ಎಂದು ಜನ ತಾವು ಮಾಡಿದ ಕಲ್ಯಾಣವನ್ನೇ ನೋಡುವರು. 'ಈ ಪಾಪ ನನ್ನಿಂದ ಆಯಿತು. ಇದಕ್ಕೇ ಆಸ್ರವವೆಂದು ಹೆಸರು' ಎಂದು ಪಾಪವನ್ನು ನೋಡುವುದಿಲ್ಲ. ಇದನ್ನು ಕಾಣುವುದು ಕಷ್ಟ, ದಿಟ. ಆದರೆ 'ಚಂಡತ್ವ, ನಿಷ್ಠುರತೆ, ಕ್ರೋಧ, ಮಾನ, ಈರ್ಷ್ಯೆ ಎಂಬ ಇವಕ್ಕೆ ಆಸ್ರವಗಾಮಿನಿಯೆಂದು ಹೆಸರು. ಈ ಕೊಳೆಗಳಿಂದ ನನ್ನನ್ನು ನಾನು ಕೆಡಿಸಿಕೊಳ್ಳುವುದು ಬೇಡ' ಎಂದು ಅದನ್ನು ಕಾಣಬೇಕು. 'ಇದು ನನ್ನ ಇಹಕ್ಕೆ, ಇದು ನನ್ನ ಪರಕ್ಕೆ' ಎಂದು ಇದನ್ನೂ ಚೆನ್ನಾಗಿ ಕಾಣಬೇಕು.

*　　　*　　　*　　　*　　　*

ತಾಯಿತಂದೆಯರಿಗೆ ಶುಶ್ರೂಷೆ ಮಾಡುವುದು ಒಳ್ಳೆಯದು. ಸ್ನೇಹಿತರು, ಪರಿಚಿತರು, ಜ್ಞಾತಿಗಳು, ಬ್ರಾಹ್ಮಣರು, ಶ್ರಮಣರು—ಇವರಿಗೆ ದಾನ ಒಳ್ಳೆಯದು. ಪ್ರಾಣಿಗಳನ್ನು ಕೊಲ್ಲದಿರುವುದು ಒಳ್ಳೆಯದು. ಕೊಂಚ ವೆಚ್ಚಮಾಡುವುದೂ ಕೊಂಚ ಕೂಡಿಡುವುದೂ ಒಳ್ಳೆಯದು.

ತಾಯಿತಂದೆಗೂ ದೊಡ್ಡವರಿಗೂ ಶುಶ್ರೂಷೆಮಾಡತಕ್ಕದ್ದು. ಪ್ರಾಣಿಗಳನ್ನು ಕಾಪಾಡತಕ್ಕದ್ದು. ಸತ್ಯ ಹೇಳತಕ್ಕದ್ದು. ಈ ಧರ್ಮಗುಣಗಳನ್ನು ಬೆಳೆಸತಕ್ಕದ್ದು. ಇದರಂತೆಯೇ ಶಿಷ್ಯರು ಆಚಾರ್ಯರನ್ನು ಗೌರವಿಸತಕ್ಕದ್ದು. ಜ್ಞಾತಿಗಳಲ್ಲಿ ತಕ್ಕ ರೀತಿ ಯಿಂದ ನಡೆಯತಕ್ಕದ್ದು. ಇದು ಬಹುಕಾಲದಿಂದ ಸಹಜವಾದುದು. ಇದರಿಂದ ದೀರ್ಘಾಯುಸ್ಸು. ಹೀಗೆ ಮಾಡತಕ್ಕದ್ದು.

ದಾಸರಲ್ಲೂ ಭೃತ್ಯರಲ್ಲೂ ಸರಿಯಾಗಿ ನಡೆದುಕೊಳ್ಳುವುದು ಒಳ್ಳೆಯದು. ತಾಯಿತಂದೆಯರ ಶುಶ್ರೂಷೆ ಒಳ್ಳೆಯದು. ಸ್ನೇಹಿತ, ಸಹವಾಸಿ, ಜ್ಞಾತಿ, ಬ್ರಾಹ್ಮಣ, ಶ್ರಮಣ—ಇವರಿಗೆ ದಾನಮಾಡುವುದು ಒಳ್ಳೆಯದು. ಪ್ರಾಣಿಗಳನ್ನು ಕೊಲ್ಲದಿರು ವುದು ಒಳ್ಳೆಯದು.

ಇದನ್ನು ಕುರಿತು ತಂದೆಯಾಗಲಿ ಮಗನಾಗಲಿ ಸಹೋದರನಾಗಲಿ ಸ್ನೇಹಿತ ಸಹವಾಸಿ ಜ್ಞಾತಿಗಳಾಗಲಿ ಅಕ್ಕಪಕ್ಕದವರಾದರೂ ಕೂಡ 'ಇದು ಒಳ್ಳೆಯದು, ಇದು ಕರ್ತವ್ಯ' ಎಂದು.ಹೇಳತಕ್ಕದ್ದು.

ಹೀಗೆ ಮಾಡಿದರೆ, ಆ **ಧರ್ಮದಾನ**ದಿಂದ ಇಹದಲ್ಲಿ ಆರಾಧಿತನಾಗುವನು, ಪರ ದಲ್ಲಿ ಅನಂತಪುಣ್ಯವಾಗುವುದು.

**ಧರ್ಮದಾನ**ದಂತಹ ದಾನವಾಗಲಿ, **ಧರ್ಮಸಹವಾಸ**ದಂತಹದಾಗಲಿ **ಧರ್ಮ ಸಂವಿಭಾಗ**ದಂತಹದಾಗಲಿ, **ಧರ್ಮಸಂಬಂಧ**ದಂತಹದಾಗಲಿ ಬೇರೆ ಇಲ್ಲ.

ಅಗಾಧವಾದ ಧರ್ಮಕಾಮತೆ, ಅಗಾಧವಾದ ಪರೀಕ್ಷೆ, ಅಗಾಧವಾದ ಶುಶ್ರೂಷೆ, ಅಗಾಧವಾದ ಉತ್ಸಾಹಗಳಿಂದಲ್ಲದೆ ಇಹಪರಗಳನ್ನು ಪಡೆಯುವುದು ಕಷ್ಟ.

*   *   *   *   *

ಕಾಯಿಲೆಯಾದಾಗ, ಮದುವೆಗಳಾದಾಗ, ಮಗು ಹುಟ್ಟಿದಾಗ ಮತ್ತು ಪಯಣ ಹೊರಟಾಗ ಜನರು ವಿವಿಧವಾದ **ಮಂಗಲ**ಗಳನ್ನು ಮಾಡುತ್ತಿರುವರು.

ಮಂಗಲಗಳು ಮಾಡತಕ್ಕವೇ. ಆದರೆ ಇಂತಹ ಮಂಗಲಗಳಿಂದ ಫಲ ಅಲ್ಪ. ಈ ಮಂಗಲದಿಂದ, **ಧರ್ಮಮಂಗಲ**ದಿಂದ ಫಲ ಹೆಚ್ಚು .

ದಾಸರಲ್ಲೂ ಭೃತ್ಯರಲ್ಲೂ ಚೆನ್ನಾಗಿ ನಡೆದುಕೊಳ್ಳುವುದೂ ಗುರುಗಳನ್ನು ಗೌರವಿಸುವುದೂ ಒಳ್ಳೆಯದು. ಬ್ರಾಹ್ಮಣರಿಗೆ ಶ್ರಮಣರಿಗೆ ದಾನ ಕೊಡುವುದು ಒಳ್ಳೆಯದು. ಇವುಗಳಿಗೂ ಇಂತಹ ಬೇರೆಯವಕ್ಕೂ **ಧರ್ಮಮಂಗಲ**ಗಳೆಂದು ಹೆಸರು.

ಆದ್ದರಿಂದ ತಂದೆಯಾಗಲಿ ಮಗನಾಗಲಿ ಸಹೋದರನಾಗಲಿ ಸ್ವಾಮಿಯಾಗಲಿ 'ಇದು ಒಳ್ಳೆಯದು. ಗುರಿ ಕೈಗೂಡುವ ತನಕ ಇದನ್ನು ಮಾಡತಕ್ಕದ್ದು' ಎಂದು ಹೇಳುವುದು ತಕ್ಕದ್ದು.

'ದಾನ ಒಳ್ಳೆಯದು' ಎಂದು ಹೇಳಲಾಗಿದೆ. ಆದರೆ ಧರ್ಮದಾನದಂತಹ ದಾನವಿಲ್ಲ, ಧರ್ಮಾನುಗ್ರಹದಂತಹ ಅನುಗ್ರಹವಿಲ್ಲ. ಆದ್ದರಿಂದ ಮಿತ್ರನಾಗಲಿ ಸಹೃದಯನಾಗಲಿ ಜ್ಞಾತಿಯಾಗಲಿ ಸಹಾಯಕನಾಗಲಿ ಆಯಾ ಪ್ರಕರಣದಲ್ಲಿ 'ಇದು ಮಾಡತಕ್ಕದ್ದು. ಇದು ಒಳ್ಳೆಯದು. ಇದರಿಂದ ಸ್ವರ್ಗ ಹೊಂದಬಹುದು' ಎಂದು ತಿಳಿಯ ಹೇಳಬೇಕು. ಈ ಸ್ವರ್ಗ ಪಡೆಯುವುದಕ್ಕಿಂತ ಹೆಚ್ಚಿನ ಕರ್ತವ್ಯ ಯಾವುದು?

ಇತರ ಮಂಗಲಗಳ ಫಲ ಸಂಶಯ: ತನ್ನ ಗುರಿಯನ್ನು ಪಡೆಯಬಹುದು, ಅಥವಾ ಇಲ್ಲ. ಅವು ಇಹಲೋಕದವು ಮಾತ್ರ. ಆದರೆ ಈ ಧರ್ಮಮಂಗಲವು ಅಕಾಲಿಕವಾದುದು. ಇಲ್ಲಿ ಗುರಿಯನ್ನು ಪಡೆಯದಿದ್ದರೂ ಪರದಲ್ಲಿ ಅನಂತಪುಣ್ಯ ಜನಿಸುವುದು. ಇಲ್ಲಿ ಗುರಿಯನ್ನು ಪಡೆದರು ಕೂಡ, ಎರಡು ಲಾಭ ಆಗುವುದು: ಈ ಧರ್ಮಮಂಗಲದಿಂದ ಇಲ್ಲಿ ಗುರಿ ಲಭಿಸುವುದು, ಪರದಲ್ಲಿ ಅನಂತಪುಣ್ಯ ಜನಿಸುವುದು.

ಕ್ಷುದ್ರಕನಾದವನಿಗೆ ಕೂಡ ಪರಾಕ್ರಮದಿಂದ ವಿಪುಲವಾದ ಸ್ವರ್ಗವನ್ನು ಪಡೆಯುವುದು ಶಕ್ಯ.

* * * * *

ದೇವಾನಾಂಪ್ರಿಯ, ಪ್ರಿಯದರ್ಶಿ ರಾಜನು ಎಲ್ಲ ಮತದವರನ್ನೂ ಸಂನ್ಯಾಸಿಗಳನ್ನೂ ಗೃಹಸ್ಥರನ್ನೂ ಪೂಜಿಸುವನು. ದಾನಗಳಿಂದಲೂ ವಿವಿಧವಾದ ಪೂಜೆಗಳಿಂದಲೂ ಅವರನ್ನು ಪೂಜಿಸುವನು.

ಆದರೆ ಸರ್ವಮತಗಳ **ಸಾರವೃದ್ಧಿ**ಯನ್ನು ಹೇಗೋ ಹಾಗೆ ಆ ದಾನವನ್ನಾಗಲಿ ಪೂಜೆಯನ್ನಾಗಲಿ ದೇವಾನಾಂಪ್ರಿಯನು ಎಣಿಸುವುದಿಲ್ಲ.

ಸಾರವೃದ್ಧಿ ಬಹುವಿಧಗಳಲ್ಲಿ ಆಗುವುದು.

ಅದಕ್ಕೆ ಮೂಲ **ವಚನಗುಪ್ತಿ**: ಎಂದರೆ, ತನ್ನ ಮತದ ಪೂಜೆಯಾಗಲಿ ಪರ ಮತದ ನಿಂದೆಯಾಗಲಿ ಪ್ರಕರಣದಲ್ಲಿಯಲ್ಲದೆ ಆಗದು. ಆಯಾ ಪ್ರಕರಣದಲ್ಲಿ ಕೂಡ ಲಘುವಾಗಿರಬೇಕು. ಆಯಾ ಪ್ರಕರಣಗಳಲ್ಲೂ ಪರಮತಗಳನ್ನು ಪೂಜಿಸಲೇಬೇಕು.

ಹೀಗೆ ಮಾಡಿದರೆ, ತನ್ನ ಮತ ಬೆಳೆಯುತ್ತದೆ, ಪರಮತಕ್ಕೆ ಉಪಕಾರವಾಗುತ್ತದೆ. ಇದರಿಂದ ಬೇರೆಯಾದುದು ಮಾಡಿದರೆ, ತನ್ನ ಮತ ಕತ್ತರಿಸಿ ಹೋಗುತ್ತದೆ, ಪರಮತಕ್ಕೆ ಅಪಕಾರವಾಗುತ್ತದೆ.

ಯಾವನು ಕೇವಲ ತನ್ನ ಮತದಲ್ಲಿನ ಭಕ್ತಿಯಿಂದ, ತನ್ನ ಮತವನ್ನು ಬೆಳಗುವೆನೆಂದು, ತನ್ನ ಮತವನ್ನು ಪೂಜಿಸಿ ಪರಮತವನ್ನು ನಿಂದಿಸುವನೋ—ಅವನು ಹಾಗೆ ಮಾಡಿದರೆ, ಅವನು ತನ್ನ ಮತಕ್ಕೇ ಬಹು ಹೆಚ್ಚು ಗಾಸಿಮಾಡುವನು.

ಆದ್ದರಿಂದ **ಸಮವಾಯವೇ** ಸಾಧು. ಎಂದರೆ, ಒಬ್ಬರು ಇನ್ನೊಬ್ಬರ ಧರ್ಮವನ್ನು ಕೇಳಬೇಕು, ಶುಶ್ರೂಷೆ ಮಾಡಬೇಕು. ಇದೇ—ಎಲ್ಲಾ ಮತಗಳವರೂ ಬಹುಶ್ರುತರಾಗಲಿ; ಕಲ್ಯಾಣಗಾಮಿಗಳಾಗಲಿ—ಎಂಬುದೇ ದೇವಾನಾಂ ಪ್ರಿಯನ ಇಚ್ಛೆ.

ಆದುವರಿಂದ ತಮ್ಮತಮ್ಮದರಲ್ಲಿ ಪ್ರಸನ್ನರಾದವರಿಗೆ 'ಎಲ್ಲಾ ಮತಗಳ ಸಾರ ವೃದ್ಧಿಯನ್ನು ಹೇಗೋ ಹಾಗೆ ದಾನವನ್ನಾಗಲಿ ಪೂಜೆಯನ್ನಾಗಲಿ ದೇವಾನಾಂ ಪ್ರಿಯನು ಎಣಿಸುವುದಿಲ್ಲ' ಎಂದು ಹೇಳತಕ್ಕದ್ದು.

ಇದು ಅದರ ಫಲ: ತನ್ನ ಮತ ಬೆಳೆಯುತ್ತದೆ, ಧರ್ಮ ಬೆಳಗುತ್ತದೆ.

*   *   *   *   *

ಲೋಕದ ಹಿತಸುಖಗಳಿಗಾಗಿ ಈ **ಧರ್ಮಲಿಪಿಯನ್ನು** ಬರೆಸಲಾಯಿತು.

**ಲೋಕಹಿತಕ್ಕಿಂತ** ಹೆಚ್ಚಿನ ಕೆಲಸವಿಲ್ಲ. ಅಗಾಧವಾದ ಪರಾಕ್ರಮದಿಂದಲ್ಲದೆ ಇದನ್ನು ಮಾಡುವುದು ಕಷ್ಟ . . .

ಇದರಲ್ಲಿ ಕೆಲವನ್ನು ಅವುಗಳ ಮಾಧುರ್ಯಕ್ಕಾಗಿ, ಜನರು ಅದರಂತೆ ನಡೆಯಲೆಂದು, ಪುನಃಪುನಃ ಹೇಳಲಾಗಿದೆ.

೨

ಮೇಲೆ ಕೊಟ್ಟಿರುವ ಮಾತುಗಳನ್ನು ಹೇಳಿದವನು **ಅಶೋಕ.** ಹೀಗೆ ಹೇಳಿದ್ದು ಮಾತ್ರವಲ್ಲ. ಅದರಂತೆ ನಡೆದು, ತನ್ನ ಪ್ರಜೆಗಳನ್ನೂ ನಡಸಿ, **'ದೇವಾನಾಂಪ್ರಿಯ'** ಎಂದರೆ 'ದೇವತೆಗಳಿಗೆ ಪ್ರಿಯನಾದವನು' ಎನ್ನಿಸಿಕೊಂಡನು; **'ಪ್ರಿಯದರ್ಶಿ'** ಎಂದರೆ 'ಪ್ರಜೆಗಳಿಗೆ ಪ್ರಿಯವಾದುದನ್ನು ಕಂಡವನು, ಅವರಿಗೆ ಪ್ರಿಯವನ್ನು ಕಾಣಿಸಿದವನು' ಎಂದು ಹೆಸರಾದನು. ಪ್ರಜೆಗಳಿಗೆ ಶೋಕವಿಲ್ಲದಂತೆ ಮಾಡಲು ತಾನು ಅನುಸರಿಸಿದ ಮಾರ್ಗ ಎಲ್ಲರಿಗೂ ಎಲ್ಲ ಕಾಲಕ್ಕೂ ತಿಳಿಯಲೆಂದು ಕಲ್ಲುಬಂಡೆಗಳ ಮೇಲೂ ಕಲ್ಲುಕಂಬಗಳ ಮೇಲೂ ಆ ಮಾರ್ಗವನ್ನು ಕುರಿತು ಶಾಸನಗಳನ್ನು ಹಾಕಿಸಿದನು.

ಅಶೋಕನು 'ಎಲ್ಲ ಪ್ರಜೆಗಳೂ ನನ್ನ ಮಕ್ಕಳು' ಎಂಬ ಭಾವನೆಯನ್ನು ಬೆಳೆಸಿದ್ದನು. ಮನುಷ್ಯವರ್ಗದಿಂದ ಮೊದಲಾಗಿ ಪಶುಪಕ್ಷಿಗಳ ವರೆಗೂ ಸುಖವಾಗಿರಬೇಕೆಂದು ಮರಗಳನ್ನು ನೆಡಿಸಿದನು, ಬಾವಿಗಳನ್ನು ತೋಡಿಸಿದನು, ವೈದ್ಯಸಹಾಯವನ್ನು ಏರ್ಪಡಿಸಿದನು, ಬೇಟೆಗಾಗಿಯೂ ಊಟಕ್ಕಾಗಿಯೂ ನಡೆಯುತ್ತಿದ್ದ ಪಶುಪಕ್ಷಿಗಳ ವಧೆಯನ್ನು ಮಿತಗೊಳಿಸಿದನು, ಸರ್ವಜೀವಿಗಳಿಗೂ ಅಭಯದಾನಮಾಡಿದನು. ಕ್ಷತ್ರಿಯನಿಗೆ ಯುಕ್ತವಾದ ಮಾರ್ಗವನ್ನು ಹಿಡಿದು ಯುದ್ಧಮಾಡಿ, ಯುದ್ಧದಿಂದ ಆಗುವ ಘೋರಗಳನ್ನು ಕಂಡು ಕರಗಿ, ಯುದ್ಧಸಂನ್ಯಾಸದಿಂದ ಪ್ರೇಮದ ಮೂಲಕ ಸ್ವಪ್ರಜೆಗಳನ್ನೂ ಪರಪ್ರಜೆಗಳನ್ನೂ ವಶಪಡಿಸಿಕೊಂಡನು. ಅದೇ ಪ್ರೇಮದಿಂದಲೇ ಭಾರತದಿಂದ ಹೊರಗಿನ ದೇಶಗಳೊಡನೆ ಬಾಂಧವ್ಯ ಬೆಳೆಸಿದನು. ಹೀಗೆ ಸರ್ವಜೀವಿಗಳೂ ಇಹಲೋಕದಲ್ಲಿ ಸುಖವಾಗಿ ಬದುಕಿರಬೇಕೆಂದು ಪ್ರಯತ್ನಿಸಿದ್ದರ ಜೊತೆಗೆ ಅವರು ಪರದಲ್ಲಿಯೂ ಸುಖಪಡೆಯುವ ಧರ್ಮದ ದಾರಿಯನ್ನು ಅವರಿಗೆ ಕಾಣಿಸಿದನು. ಸಂಸಾರಿಗಳ ಕ್ಷೇಮಲಾಭಕ್ಕಾಗಿ ಸಂತತವೂ ಶ್ರಮಿಸಿದ ಹಾಗೆಯೇ ಸಂನ್ಯಾಸಿಗಳ ಹಿತಚಿಂತನೆಯಿಂದಲೂ ಆತನು ಉದ್ಯೋಗಿಸಿದನು. ಸಣ್ಣವರಾಗಲಿ ದೊಡ್ಡವರಾಗಲಿ, ಗಂಡಾಗಲಿ ಹೆಣ್ಣಾಗಲಿ, ತನ್ನ ಮತದವರಾಗಲಿ ಪರಮತದವರಾಗಲಿ, ಸಂಸಾರಿಯಾಗಲಿ ಸಂನ್ಯಾಸಿಯಾಗಲಿ, ಭಾರತದವರಾಗಲಿ ಭಾರತದಿಂದ ಹೊರಗಿನವರಾಗಲಿ—ಮಾನವವರ್ಗವೆಲ್ಲ ಒಂದು; ಮಾನವರಾಗಲಿ ತಿರ್ಯಕ್ಕುಗಳಾಗಲಿ—ಪ್ರಾಣಿವರ್ಗವೆಲ್ಲ ಒಂದು; ಇಹವಾಗಲಿ ಪರವಾಗಲಿ—ಇಹಪರ ಸೇರಿ

ಒಂದು—ಎಂಬ ಘನವಾದ ಭಾವನೆಯಿಂದ ರಾಜ್ಯಭಾರಮಾಡಿ, ತನ್ನ ಗುರಿಯನ್ನು ಬಹುಮಟ್ಟಿಗೆ ಸಾಧಿಸಿದ ಭಾಗ್ಯಶಾಲಿ ಅಶೋಕ. ಇದಕ್ಕೆ ಅವನ ಶಾಸನಗಳೇ ಸಾಕ್ಷಿ.

ಅಶೋಕನ ಶಾಸನಗಳು ಎಲ್ಲವೂ ಓದಬೇಕಾದ್ದೇ, ಮನನಮಾಡಬೇಕಾದ್ದೇ, ಅದರಂತೆ ನಡೆಯಬೇಕಾದ್ದೇ. ಆ ಶಾಸನವಾಕ್ಯಗಳ ಸಾರವನ್ನು ಸಂಗ್ರಹವಾಗಿ ಮೇಲೆ ಕೊಟ್ಟಿದೆ. ಆದರೂ 'ಅಶೋಕಚಕ್ರ'ವನ್ನು ಎತ್ತಿ ಹಿಡಿಯುತ್ತಿರುವ ನಾವು ಅವನ ಅನೇಕ ಶಾಸನಗಳಲ್ಲಿ ಮೂರನ್ನಾದರೂ ಮರೆಯದೆ ಸ್ಮರಿಸುತ್ತಲೇ ಇರಬೇಕು.

ಮೊದಲನೆಯದು, ಆತನು ಕಲ್ಲುಬಂಡೆಗಳ ಮೇಲೆ ಕೆತ್ತಿಸಿರುವ ಹದಿನಾಲ್ಕು ಶಾಸನಗಳಲ್ಲಿ **ಆರನೆಯದು.** ಅಶೋಕನೇನೋ ಜನರು ನಡೆಯಬೇಕಾದ ದಾರಿಯನ್ನು ನಿರ್ದೇಶಿಸಿದನು, ಜನರು ಅದರಂತೆ ನಡೆಯಬೇಕೆಂಬುದನ್ನು ನೋಡುವುದಕ್ಕೆ ಮೇಲ್ವಿಚಾರಕರನ್ನು ನೇಮಿಸಿದನು. ಏರ್ಪಾಟು ಎಷ್ಟು ಸಮರ್ಪಕವಾಗಿ ನಡೆಯುತ್ತಿತ್ತೆಂಬುದನ್ನು ಕುರಿತು ತಾನು ತರಿಸಿಕೊಳ್ಳುತ್ತಿದ್ದ ವರದಿಗಳಿಗೆ ಸಂಬಂಧಪಟ್ಟದ್ದು ಈ ಶಾಸನ. ಇದರಲ್ಲಿ ಅಶೋಕ ಹೀಗೆ ಹೇಳುತ್ತಾನೆ: "ಬಹುಕಾಲದಿಂದಲೂ ಹೇಳಿದ ಕೆಲಸಗಳನ್ನು ನಡಸುವುದೂ ಅದನ್ನು ಕುರಿತು ಎಲ್ಲಾ ಕಾಲಗಳಲ್ಲೂ ವರದಿ ಒಪ್ಪಿಸುವುದೂ ನಡೆದಿಲ್ಲ. ಈಗ ನಾನು ಈ ಏರ್ಪಾಟು ಮಾಡಿದ್ದೇನೆ—ನಾನು ಊಟ ಮಾಡುತ್ತಿರಲಿ, ಅಂತಃಪುರದಲ್ಲಿರಲಿ, ಶಯನಗೃಹದಲ್ಲಿರಲಿ, ಅರಮನೆಯಲ್ಲಿರಲಿ, ರಥದಲ್ಲಿರಲಿ, ಉದ್ಯಾನದಲ್ಲಿರಲಿ, ಎಲ್ಲೆ ಇದ್ದರೂ ವರದಿಯೊಪ್ಪಿಸುವವರು ಪ್ರಜೆಗಳ ವಾರ್ತೆಯನ್ನು ತಂದು ನನಗೆ ತಿಳಿಸತಕ್ಕದ್ದು. ಪ್ರಜೆಗಳ ಕಾರ್ಯಕ್ಕಾಗಿ ನಾನು ಯಾವ ಸ್ಥಳದಲ್ಲಿಯಾದರೂ ಸಿದ್ಧವಾಗಿರುತ್ತೇನೆ."

ಎರಡನೆಯದು, ಅದೇ ಹದಿನಾಲ್ಕು ಶಿಲಾಶಾಸನಗಳಲ್ಲಿ **ಹನ್ನೆರಡನೆಯದು.** ಸರ್ವಮತಗಳ ಸಾರವೃದ್ಧಿ ಆಗಬೇಕೆಂಬುದೇ ಅಶೋಕನ ಏಕೈಕ ಅಭಿಲಾಷೆ; ಅದಕ್ಕೆ ಮೂಲ ವಚನಗುಪ್ತಿ; ಇದರ ಫಲ ಸಮವಾಯ, ಅದೇ ಸಾಧು—ಎಂಬುದನ್ನು ಮಕ್ಕಳಿಗೆ ಹೇಳುವಂತೆ ಮೃದುವಾದ ಮಣಿಪೋಣಿಸಿದಂತಹ ಮಾತುಗಳಲ್ಲಿ ಹೇಳಿರುವ ಈ ಶಾಸನದ ಅಮೃತವಾಕ್ಯಗಳ ಅನುವಾದ ಪುಟ ೭೪ರಲ್ಲಿ ಇದೆ.

ಮೂರನೆಯದು, ಅದೇ ಹದಿನಾಲ್ಕು ಶಿಲಾಶಾಸನಗಳಲ್ಲಿ **ಹದಿಮೂರನೆಯದು.** ಅಶೋಕನು ಯುದ್ಧದ ಗೋಜನ್ನು ತೊರೆದ ಸಂದರ್ಭವನ್ನು ಆಡಂಬರವಿಲ್ಲದೆ

ವಿವರಿಸುವ ಈ ಶಾಸನದಲ್ಲಿ 'ಪ್ರೇಮದಿಂದ ಸಾಧಿಸುವ ಧರ್ಮವಿಜಯಕ್ಕಿಂತ ಮೀರಿದ ವಿಜಯವಿಲ್ಲ' ಎಂಬ ತನ್ನ ಸ್ವಾನುಭವವನ್ನು ಸ್ಥಾಪಿಸಿದ್ದಾನೆ. ಇವಕ್ಕಿಂತ ಹೆಚ್ಚಿನ ವಿಶೇಷವೆಂದರೆ—ತಾನು ಹಿಂದೆ ಯುದ್ಧಮಾಡಿದ ಪ್ರಮಾದವನ್ನು ಲೋಕದೆದುರಿಗೆ ಒಪ್ಪಿಕೊಂಡು, ಆಗಿಹೋದ ಪ್ರಮಾದಕ್ಕಾಗಿ ಪಶ್ಚಾತ್ತಾಪವನ್ನು ತೋಡಿಕೊಂಡು, ಇನ್ನು ಮುಂದೆ ಅಂತಹ ಪ್ರಮಾದವಾಗದಂತೆ ಅಪ್ರಮತ್ತನಾಗಿ ನಡೆಯುವೆನೆಂದು ಲೋಕಕ್ಕೆ ಅಭಿವಚನದ ಅಭಯ ಕೊಟ್ಟದ್ದು. ವಿಜಯಿಯಾದ ಅನಂತರ ವಿಜಯ ತಂದ ಯುದ್ಧವನ್ನು ನಿರಾಕರಿಸಿದ ದೊರೆ ಲೋಕದಲ್ಲಿ ಹೇಗೆ ಇನ್ನೊಬ್ಬ ಇಲ್ಲವೋ ಅದರಂತೆಯೇ ತಾನು ಮಾಡಿದುದಕ್ಕೆ ಪಶ್ಚಾತ್ತಾಪವನ್ನು ಇಷ್ಟು ಬಹಿರಂಗವಾಗಿ ಪ್ರಕಟಿಸಿದ ರಾಜ ಇನ್ನೊಬ್ಬನಿಲ್ಲ.

ಅದೇ ಹದಿಮೂರನೆಯ ಶಾಸನದಲ್ಲಿ ಹೀಗೆ ಹೇಳುತ್ತಾನೆ: "ದೇವಾನಾಂಪ್ರಿಯನು ತನಗೆ ಅಭಿಷೇಕವಾಗಿ ಎಂಟನೆಯ ವರ್ಷದಲ್ಲಿ ಕಳಿಂಗರನ್ನು ಜಯಿಸಿದನು. ೧,೫೦,೦೦೦ ಜನ ಸೆರೆಸಿಕ್ಕಿದರು, ೧೦೦,೦೦೦ ಕೊಲೆಯಾದರು, ಅದಕ್ಕೆ ಬಹುಮಡಿಯಾಗಿ ಅನೇಕರು ನಾಶವಾದರು. ಇದಾದಮೇಲೆ ದೇವಾನಾಂಪ್ರಿಯನಿಗೆ ಪರಿತಾಪವಾಯಿತು. ಸೋಲದಿದ್ದ ದೇಶವನ್ನು ಸೋಲಿಸುವುದೆಂದರೆ ಕೊಲೆಯಾಗುತ್ತದೆ, ಸಾವಾಗುತ್ತದೆ, ಜನ ಸೆರೆಸಿಕ್ಕುತ್ತಾರೆ. ಇದರಿಂದ ದೇವಾನಾಂಪ್ರಿಯನಿಗೆ ಮಹಾದುಃಖ, ಪಶ್ಚಾತ್ತಾಪ. ಪಶ್ಚಾತ್ತಾಪಕ್ಕೆ ಇನ್ನೂ ಒಂದು ಕಾರಣವುಂಟು. ಯಾವ ದೇಶದಲ್ಲಿ ಯುದ್ಧವಾದರೂ ಅಲ್ಲಿನ ಜನರಿಗೆ ಇಷ್ಟಮಿತ್ರರ ವಿಯೋಗವುಂಟಾಗಿ ಅವರಿಗೆ ಹಿಂಸೆಯಾಗುತ್ತದೆ. ಆಗ ಕಳಿಂಗದಲ್ಲಿ ಕೊಲೆಯಾದವರ, ಸತ್ತವರ, ಸೆರೆಸಿಕ್ಕಿದವರ ಸಂಖ್ಯೆಯಲ್ಲಿ ನೂರರ ಒಂದು ಪಾಲು, ಸಾವಿರದ ಒಂದು ಪಾಲು ಈಗ ಅದೇ ಗತಿ ಹೊಂದಿದರೂ ದೇವಾನಾಂಪ್ರಿಯನಿಗೆ ತುಂಬ ದುಃಖವಾಗುತ್ತದೆ."

ಪುನಃ ಅದೇ ಶಾಸನದಲ್ಲಿ "ಇಷ್ಟೇ ಅಲ್ಲದೆ, ಯಾರಾದರೂ ತನಗೆ ಅನ್ಯಾಯ ಮಾಡಿದರೂ, ಅದನ್ನು ಸಹಿಸಿಕೊಳ್ಳುವುದು ಸಾಧ್ಯವಿದ್ದರೆ, ದೇವಾನಾಂಪ್ರಿಯನು ಅದನ್ನು ಸಹಿಸಬೇಕು" ಎಂದು ಹೇಳಿ, ಎಲ್ಲರಿಗೂ ಇದು ತಿಳಿಯುವುದಕ್ಕಾಗಿ ಬೇರೆ ಎರಡು ಪ್ರತ್ಯೇಕ ಶಾಸನಗಳನ್ನು ಬರೆಸಿದನು. ಇವುಗಳನ್ನು 'ಕಳಿಂಗ ಶಾಸನ' ಗಳೆನ್ನುತ್ತಾರೆ. ಇದರಲ್ಲಿ ಕಳಿಂಗದ ಗಡಿಪ್ರದೇಶಗಳಲ್ಲಿ ಇರುವವರನ್ನು ಕುರಿತು

"ಪ್ರಜೆಗಳೆಲ್ಲರೂ ನನ್ನ ಮಕ್ಕಳು, ಗಡಿನಾಡವರ ಮೇಲೆ ನಾನು ಆಕ್ರಮಣಮಾಡುವುದಿಲ್ಲ. ಅವರು ಭಯಪಡುವುದು ಬೇಡ. ಧರ್ಮವನ್ನು ನಡಸಿ ಅವರು ಸಂತೋಷದಿಂದ ಇರಲಿ" ಎಂದಿದ್ದಾನೆ.

ಅದೇ ಹದಿಮೂರನೆಯ ಶಾಸನದಲ್ಲಿ ತನ್ನ ಧರ್ಮವಿಜಯವನ್ನು ಕುರಿತು "ಧರ್ಮವಿಜಯವೇ ಪರಮವಾದ ವಿಜಯವೆಂದು ದೇವಾನಾಂಪ್ರಿಯನ ಮತ. ಈ ವಿಜಯವನ್ನು ದೇವಾನಾಂಪ್ರಿಯನು ತನ್ನ ರಾಜ್ಯದಲ್ಲೂ ನೆರೆಯ ರಾಜ್ಯಗಳಲ್ಲೂ ಸಾಧಿಸಿದ್ದಾನೆ. ಆರುನೂರು ಯೋಜನಗಳ ವರೆಗೂ—ಗ್ರೀಕರ ದೊರೆ ಆಂಟಿಯೋಕ ಇರುವಲ್ಲಿ, ಆ ಆಂಟಿಯೋಕನಿಗೆ ಉತ್ತರದಲ್ಲಿ ಟಾಲೆಮಿ, ಆಂಟಿಗೊನೆ, ಮಗ, ಅಲೆಕ್ಸಾಂಡರ್ ಎಂಬ ನಾಲ್ವರು ರಾಜರು ಇರುವಲ್ಲಿ ; ದಕ್ಷಿಣದಲ್ಲಿ ಚೋಳ, ಪಾಂಡ್ಯ ; ಇಲ್ಲಿಯೂ ರಾಜನು ಆಳುವ ಪ್ರದೇಶಗಳಲ್ಲಿ ; ಯವನ, ಕಾಂಭೋಜ, ನಾಭಕದ ನಾಭಪಂತಿಗಳು, ಭೋಜರು, ಪಿಟನಿಕರು, ಆಂಧ್ರರು, ಪುಳಿಂದರು—ಇವರಲ್ಲಿ ಎಲ್ಲೆಲ್ಲೂ ಜನ ದೇವಾನಾಂಪ್ರಿಯನ ಧರ್ಮದ ಉಪದೇಶವನ್ನು ಅನುಸರಿಸುತ್ತಾರೆ. ರಾಜನ ಸಂದೇಶವನ್ನು ತೆಗೆದುಕೊಂಡು ಹೋಗುವವರು ಪ್ರವೇಶಿಸದಿರುವ ಕಡೆಗಳಲ್ಲಿ ಕೂಡ ಜನರು ದೇವಾನಾಂಪ್ರಿಯನ ಧರ್ಮೋಪದೇಶವನ್ನು ಕೇಳಿ, ಅದರಂತೆ ನಡೆಯುವರು. ಇದರಿಂದ ಉಂಟಾಗುವ ವಿಜಯವು ಆನಂದದಿಂದ ಕೂಡಿದ ವಿಜಯ." ಎಂದು ಹೇಳಿದ್ದಾನೆ.

ನಿಜವಾಗಿಯೂ, ಅಶೋಕನು ಹಿಡಿದು ನಡೆದ ಈ ಮಾರ್ಗವೇ ಪ್ರಜೆಗಳನ್ನು **ಅ-ಶೋಕ**ಸ್ಥಿತಿಗೆ ನಡೆಸಲು ಸಮರ್ಥವಾದ ಮಾರ್ಗ. ಇದನ್ನು ಸದಾ ಜ್ಞಾಪಕ ಕೊಡುವುದಕ್ಕೆ **'ಅಶೋಕಚಕ್ರ'** ಸಮರ್ಥವಾದ ಸಾಧನ.

# ಗೌತಮ ಬುದ್ಧ

## (ಸರ್ವಭೂತಹಿತಾನುಕಂಪಿ)



ಹಿಂದಿನ ಪುಟದಲ್ಲಿ ಇರುವ ಬುದ್ಧನ ಚಿತ್ರವು ಗಾಂಧಾರ ದೇಶದ ಒಂದು ಪ್ರಾಚೀನಶಿಲ್ಪದಿಂದ ಪ್ರತಿಮಾಡಿಕೊಂಡದ್ದು.

# ಗೌತಮ ಬುದ್ಧ.

ಸರ್ವರಿಗೂ ಪರಿಚಿತನಾದ ಭಗವಾನ್ ಬುದ್ಧಗುರುವು ಲೋಕಹಿತಕ್ಕಾಗಿ ನಡಸಿದ ಧರ್ಮಚಕ್ರಪ್ರವರ್ತನವನ್ನೂ ಆ ಧರ್ಮದ ಸ್ಥೂಲವಾದ ಲಕ್ಷಣಗಳನ್ನೂ ಈ ಮೊದಲೇ 'ಧರ್ಮಚಕ್ರ'ದ ಅಧ್ಯಾಯದಲ್ಲಿ ಪ್ರಸ್ತಾಪಿಸಿಯಾಗಿದೆ. ಈ ಬುದ್ಧ ಗುರುವಿನ ಶ್ರಾವಕನಾಗಿ ಬದುಕಿ, ರಾಜಾ ಅಶೋಕನು 'ಧರ್ಮಾಶೋಕ' ಎಂದು ಹೆಸರುಪಡೆದನು. ಈ ಗುರುಶಿಷ್ಯಸಂಬಂಧವೇ ಕಾರಣವಾಗಿ 'ಅಶೋಕಚಕ್ರ'ವೆಂಬ ಹೆಸರಿನಿಂದ ಭಗವಂತನಾದ ಬುದ್ಧನ ಸ್ಮರಣೆಯಾಗುವುದು ಅನಿವಾರ್ಯ.

'ಗೌತಮ' ಎಂಬ ವಿಶೇಷಣವುಳ್ಳ ಬುದ್ಧನ ಬದುಕನ್ನು ಓದಿ ಕೇಳಿ ತಿಳಿದಿರುವವರಿಗೆ, ಆ ಮಹಾಜೀವಸೌಧದ ಔನ್ನತ್ಯವನ್ನು ಕಂಡವರಿಗೆ, ಅದರ ಅಡಿಪಾಯ ಎಷ್ಟೆಂಬುದು ಅಷ್ಟು ಪರಿಚಿತವಲ್ಲ. ಬೌದ್ಧ ಸಂಪ್ರದಾಯ ಹೀಗೆ ಹೇಳುತ್ತದೆ: ಅನೇಕ ಕಲ್ಪಗಳ ಹಿಂದೆ, 'ದೀಪಂಕರ' ಎಂಬ ಒಬ್ಬ ಬುದ್ಧನಿದ್ದನು. (ಈ 'ಬುದ್ಧ' ಎಂಬುದು ಯಾರ ಅಂಕಿತನಾಮವೂ ಅಲ್ಲ. ಅದು ಒಂದು ನಿರ್ದಿಷ್ಟವಾದ ಯೋಗ್ಯತೆಯನ್ನು ಸೂಚಿಸುವ ಶಬ್ದಸಂಕೇತ. ಬೌದ್ಧ ಸಂಪ್ರದಾಯದಲ್ಲಿ ಆಗಿಹೋದ ಬುದ್ಧರು ಅನೇಕರು ಉಂಟು, ಮುಂದೆ ಬರಬೇಕಾದ ಬುದ್ಧರೂ ಉಂಟು.) ಆತನ ಕಾಲದಲ್ಲಿ 'ಸುಮೇಧ' ಎಂಬ ಬ್ರಾಹ್ಮಣನೊಬ್ಬನಿದ್ದನು. ಈ ಸುಮೇಧನು ದೀಪಂಕರ ಬುದ್ಧನ ಜೀವಕಾರುಣ್ಯವನ್ನು ಕಂಡು ಕರಗಿ, ತಾನೂ ಅಂತಹ ಬುದ್ಧನಾಗಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು. (ಇದನ್ನು **ಮನೋಪ್ರಣಿಧಾನ** ಎನ್ನುತ್ತಾರೆ.) ಅನಂತರ ದೀಪಂಕರನ ಸನ್ನಿಧಿಯಲ್ಲಿ ತನ್ನ ನಿಶ್ಚಯವನ್ನು ಬಾಯಿಬಿಟ್ಟು ಹೇಳಿ, (ಇದನ್ನು **ವಾಕ್ಪ್ರಣಿಧಾನ** ಎನ್ನುತ್ತಾರೆ) ತಾನು ಆ ಬುದ್ಧನ ಶಿಷ್ಯನಾದನು. ಆಗಿ, ಆ ಜನ್ಮದಲ್ಲೂ ಅದರ ಅನಂತರ ತಾನು ಹುಟ್ಟಿಬಂದ ಸಾವಿರಾರು ಜನ್ಮಗಳಲ್ಲೂ ಮುಂದೆ ತಾನು ಬುದ್ಧನಾಗುವುದಕ್ಕೆ ಬೇಕಾದ ಅನೇಕ ಪೂರ್ಣಗುಣಗಳನ್ನು (ಇವುಗಳನ್ನು **ಪಾರಮಿಗಳೆಂದು** ಕರೆಯುತ್ತಾರೆ) ಬೆಳೆಸಿಕೊಂಡು, ತನ್ನ ಕಡೆಯ ಜನ್ಮದಲ್ಲಿ ಕಪಿಲವಸ್ತುವಿನ ಶುದ್ಧೋದನನಿಗೆ ಮಗನಾಗಿ ಹುಟ್ಟಿದನು.

ಹೀಗೆ ಹುಟ್ಟಿ, ಮುಂದೆ ಗೌತಮನೆಂಬ ಬುದ್ಧನೆನ್ನಿಸಿದವನು ತಾನು ಇನ್ನೂ ಗೃಹಸ್ಥನಾಗಿರುವಾಗಲೇ ಲೋಕದಲ್ಲಿ ದುಃಖದ ಭಾರ ಎಷ್ಟಿದೆ ಎಂಬುದನ್ನು ತಕ್ಕ

ಮಟ್ಟಿಗೆ ಕಂಡನು. "ನೀರು ಕಡಿಮೆಯಾಗಿರುವ ಕೊಳವಲ್ಲಿ ಬಹುಸಂಖ್ಯೆಯಲ್ಲಿರುವ ಮತ್ಸ್ಯಗಳು ಹೇಗೆ ವಿಲಿವಿಲಿ ಒದ್ದಾಡುವುವೋ ಹಾಗೆ" ಜನರು ದುಃಖಕ್ಕೆ ಈಡಾಗಿ ನರಳುತ್ತಿದ್ದುದನ್ನು ನೋಡಿ, ಅವರ ದುಃಖವನ್ನು ಹೋಗಲಾಡಿಸುವ ಮಾರ್ಗವನ್ನು ಕಂಡುಬರಬೇಕೆಂದು ತಾನು ಮನೆಬಿಟ್ಟು ಕಾಡಿಗೆ ಹೋದನು.

ಕಾಡಿನಲ್ಲಿ ಅದಕ್ಕಾಗಿ ಆರು ವರ್ಷಗಳ ಕಾಲ ತಪಸ್ಸುಮಾಡಿ, ಕಡೆಗೆ ಒಂದು ದಿನ—

ಇಹಾಸನೇ ಶುಷ್ಯತು ಮೇ ಶರೀರಂ
ತ್ವಗಸ್ಥಿಮಾಂಸಂ ಪ್ರಲಯಂ ಚ ಯಾತು
ಅಪ್ರಾಪ್ಯ ಬೋಧಿಂ ಬಹುಕಲ್ಪದುರ್ಲಭಂ
ನೈವಾಸನಾತ್ ಕಾಯಮೇತತ್ ಚಲಿಷ್ಯತಿ

"ಈ ಆಸನದಲ್ಲಿಯೇ ನನ್ನ ಶರೀರವು ಒಣಗಿಹೋಗಲಿ, ಚರ್ಮ ಮೂಳೆ ಮಾಂಸಗಳು ನಾಶವಾಗಲಿ—ಬಹುಕಲ್ಪಗಳಿಂದ ಪಡೆಯಲು ಕಷ್ಟವಾದ ಬೋಧಿಯನ್ನು ಪಡೆಯದೆ ಈ ದೇಹ ಈ ಆಸನದಿಂದ ಕದಲುವುದಿಲ್ಲ" ಎಂದು ದೃಢನಿಶ್ಚಯಮಾಡಿ, ದುಃಖವನ್ನು ನಿರ್ಮೂಲಗೊಳಿಸುವ ಆ ಬೋಧಿಯೆಂಬ ಪರಮಜ್ಞಾನವನ್ನು ಪಡೆದನು.

ಅನಂತರವೇ "ಕಣ್ಣು ಕಾಣದ ಈ ಕುರುಡುಜನರಿಗಾಗಿ ಅಮೃತದುಂದುಭಿಯನ್ನು ಬಾರಿಸುತ್ತೇನೆ" ಎಂದು ಧರ್ಮಭೇರೀರವವನ್ನು ವಾರಾಣಸಿಯಲ್ಲಿ ಮೊದಲು ಮೊಳಗಿಸಿದನು. ಆ ದಿನ ಹಾಗೆ ಮೊದಲು ಮಾಡಿದ ಆ ಧರ್ಮಚಕ್ರಪ್ರವರ್ತನವು—

ಕಲಿಕಲುಷಕೃತಾನಿ ಯಾನಿ ಲೋಕೇ
ಮಯಿ ನಿಪತನ್ತು ವಿಮುಚ್ಯತಾಂ ಹಿ ಲೋಕಃ

"ಕಲಿಯಿಂದ ಕೆಟ್ಟುಹೋಗಿರುವ ಈ ಲೋಕದಲ್ಲಿ ನಾನು ಹೋದರೂ ಆಗಬಹುದು—ಲೋಕ ಮಾತ್ರ ದುಃಖದಿಂದ ಬಿಡುಗಡೆಹೊಂದಿದರೆ ಸಾಕು" ಎಂಬ ಅಸೀಮವಾದ ಲೋಕಕಾರುಣ್ಯದಿಂದ ನಲವತ್ತೈದು ವರ್ಷಗಳ ಕಾಲ 'ಅಭಿಕ್ರಮನಾಶ' ವಿಲ್ಲದೆ 'ಪ್ರತ್ಯವಾಯ' ವಿಲ್ಲದೆ ಉರುಳಿತು.

ಬುದ್ಧನು ತನ್ನ ಧರ್ಮಸಾಮ್ರಾಜ್ಯವನ್ನು ಸ್ಥಾಪಿಸಲು ಹೊರಟ ಮೊದಲಿನಲ್ಲಿ ತನ್ನ ಸಹಾಯಕರಾದ ಶಿಷ್ಯರಿಗೆ ಹೀಗೆ ಹೇಳಿದನು:

ಚರಥ ಭಿಕ್ಷವೇ ಚಾರಿಕಂ—ಬಹುಜನಹಿತಾಯ ಬಹುಜನಸುಖಾಯ—ಅತ್ಥಾಯ ಹಿತಾಯ ಸುಖಾಯ ದೇವಮನುಸ್ಸಾನಂ.

ಎಂದರೆ "ಭಿಕ್ಷುಗಳೆ, ಬಹುಜನರಿಗೆ ಹಿತವಾಗಬೇಕೆಂದು, ಬಹುಜನರಿಗೆ ಸುಖವಾಗಬೇಕೆಂದು, ದೇವತೆಗಳಿಗೂ ಮನುಷ್ಯರಿಗೂ ಬಯಸಿದುದು ಆಗಬೇಕು, ಹಿತವಾಗಬೇಕು, ಸುಖವಾಗಬೇಕು, ಎಂದು ನೀವು ನಡತೆಯನ್ನು ನಡೆಸಿಕೊಳ್ಳಿರಿ" ಎಂದನು. ಅದೇ ಭಾವವನ್ನೇ ಮತ್ತೆ ತನ್ನ ಪರಿನಿರ್ವಾಣಕಾಲದಲ್ಲಿಯೂ ಕಡೆಯ ಉಪದೇಶವಾಗಿ ಪ್ರಸಾದಿಸಿದನು :

ಅತ್ತದೀಪಾ ವಿಹರಥ ; ಅಪ್ಪಮಾದೇನ ಸಂಪಾದೇಥ

"ಆತ್ಮವನ್ನು ದೀಪದಂತೆ ಇಟ್ಟುಕೊಂಡವರಾಗಿ ವಿಹರಿಸಿರಿ. ಅಪ್ರಮಾದದಿಂದ ಸಂಪಾದಿಸಿರಿ." ಎಂದರೆ, "ಆತ್ಮದ ಬೆಳೆವಣಿಗೆಯನ್ನು ಸದಾ ಕಣ್ಣಮುಂದೆ ಇರಿಸಿಕೊಂಡು ನಡತೆಯನ್ನು ತಿದ್ದಿಕೊಳ್ಳಿ. ಹೀಗೆ ಆತ್ಮವನ್ನು ಬೆಳೆಸಿಕೊಂಡ ಅನಂತರ ಎಚ್ಚರ ತಪ್ಪದೆ ಲೋಕದ ಹಿತವನ್ನು ಸಾಧಿಸಿರಿ" ಎಂಬುದು ಭಗವಂತನ ಕಡೆಯ ಅನುಶಾಸನ.

ಬುದ್ಧನ ಬದುಕಿನ, ಬೋಧೆಯ ಜೀವಾಳವನ್ನು ಆತನೇ ಕರುಣಿಸಿದ 'ಮೈತ್ರೀ ಸೂಕ್ತ'ವು ಹೀಗೆ ವ್ಯಕ್ತಪಡಿಸುತ್ತದೆ:

> "ಪರಮಾರ್ಥವನ್ನು ಪಡೆಯಬೇಕೆನ್ನುವವನು, ಶಾಂತವಾದ ಸ್ಥಿತಿಯನ್ನು ಬಯಸುವವನು ಮಾಡಬೇಕಾದುದು ಇದು :
>
> "ಅವನು ಶಕ್ತನಾಗಿರಬೇಕು, ತುಂಬ ಋಜುವಾಗಿರಬೇಕು, ಒಳ್ಳೆಯ ಮಾತಾಡಬೇಕು, ಮೃದುವಾಗಿರಬೇಕು, ವಿನಯಶಾಲಿಯಾಗಿರಬೇಕು. ಕಳವಳವಿಲ್ಲದೆ, ಶಾಂತನಾಗಿ, ಕರ್ತವ್ಯಭಾರವನ್ನು ಹೊತ್ತು, ಅನಾಸಕ್ತನಾಗಿ, ಜಿತೇಂದ್ರಿಯನಾಗಿ, ವಿವೇಕಶಾಲಿಯಾಗಿ, ದುರಾಸೆಯಿಂದ ದೂರವಾಗಿರಬೇಕು. ತಿಳಿದವರು ತನ್ನನ್ನು ನಿಂದಿಸಬಹುದಾದಂತಹ ಕ್ಷುದ್ರಕಾರ್ಯಗಳನ್ನು ಮಾಡಬಾರದು. ಸರ್ವಜೀವಿಗಳ ಆತ್ಮಗಳಿಗೂ ಸುಖವಾಗಲಿ ಎಂಬ ಭಾವನೆಯನ್ನು ಬೆಳೆಸಬೇಕು.
>
> "ಪ್ರಾಣ ಉಳ್ಳವುಗಳು ಯಾವಯಾವುವು ಇವೆಯೋ—ಅವು ಬಲವಿಲ್ಲದವಾಗಲಿ, ಬಲವುಳ್ಳವಾಗಲಿ, ಯಾವುದನ್ನೂ ಬಿಡದೆ ; ದೀರ್ಘವಾದುವಾಗಲಿ ಮಹತ್ತಾದುವಾಗಲಿ ; ಮಧ್ಯಮ, ಹ್ರಸ್ವಕ, ಅಣುಕ, ಸ್ಥೂಲ ಯಾವುದೇ ಆಗಲಿ ; ಕಣ್ಣಿಗೆ ಕಂಡುದಾಗಲಿ ಕಾಣದುದಾಗಲಿ ; ದೂರದಲ್ಲಿರಲಿ, ದೂರವಲ್ಲದ ಕಡೆ ಇರಲಿ ; ಹಿಂದೆ ಇದ್ದುವಾಗಲಿ,

ಮುಂದೆ ಆಗುವುವಾಗಲಿ—ಸರ್ವಜೀವಿಗಳ ಆತ್ಮಗಳಿಗೂ ಸುಖವಾಗಲಿ ಎಂಬ ಭಾವನೆಯನ್ನು ಬೆಳೆಸಬೇಕು.

"ಒಬ್ಬರು ಇನ್ನೊಬ್ಬರನ್ನು ಹೀನೈಸದಿರಲಿ. ಯಾರನ್ನೂ ಎಲ್ಲಿಯೂ ಯಾವುದರಲ್ಲೂ ಅತಿಯಾಗಿ ಎಣಿಸದಿರಲಿ. ರೋಷದಿಂದ, ದ್ವೇಷ ಬುದ್ಧಿಯಿಂದ ಒಬ್ಬನು ಇನ್ನೊಬ್ಬನಿಗೆ ದುಃಖವನ್ನು ಬಯಸದಿರಲಿ. ತಾಯಿ ತನ್ನ ಮಗನನ್ನು, ಒಬ್ಬನೇ ಮಗನನ್ನು, ಹೇಗೆ ತನಗೆ ಉಸಿರಿರುವ ವರೆಗೂ ಕಾಪಾಡುವಳೋ ಹಾಗೆಯೇ ಸರ್ವಜೀವಿಗಳಲ್ಲಿ ಮನಸ್ಸನ್ನು ಪರಿಮಿತಿಯಿಲ್ಲದಂತೆ ಬೆಳಸಲಿ. ಸರ್ವಲೋಕದ ಮೇಲಿನ ಮೈತ್ರಿಗಾಗಿ ಮನಸ್ಸನ್ನು ಪರಿಮಿತಿಯಿಲ್ಲದಂತೆ ಬೆಳಸಲಿ. ಮೇಲುಮುಖವಾಗಿ, ಕೆಳಮುಖವಾಗಿ, ನಡುವೆ ಎಲ್ಲ ಕಡೆಗೂ, ಯಾವ ಅಡ್ಡಿಯೂ ಇಲ್ಲದೆ, ವೈರವಿಲ್ಲದೆ, ಎದುರು ಪಕ್ಷವಿಲ್ಲದೆ ಮನಸ್ಸನ್ನು ಅಪರಿಮಿತವಾಗಿ ಬೆಳಸಲಿ.

"ನಿಂತಿರಲಿ, ನಡೆಯುತ್ತಿರಲಿ, ಕುಳಿತಿರಲಿ, ಅಥವಾ ಮಲಗಿರಲಿ, ಎಲ್ಲಿಯವರೆಗೆ ಆಲಸ್ಯವಿರುವುದಿಲ್ಲವೋ ಅಲ್ಲಿಯವರೆಗೂ ಈ ಸ್ಮೃತಿಯನ್ನು ಎತ್ತಿ ನಿಲ್ಲಿಸಲಿ. ಆಗ, ನಾವು ತಂಗಿರುವ ಭೂಮಿಯೆಂಬ ಈ ವಿಹಾರವನ್ನು **ಬ್ರಹ್ಮ** ಎಂದು ಕರೆಯುತ್ತಾರೆ."

ಈ ಧೀರವಾದ ಶಿವಮಾರ್ಗದಲ್ಲಿ ನಡೆದುದರ ಫಲವಾಗಿ ದೇಶವು ಎಂತಹ ಉತ್ಕರ್ಷಪಡೆಯಿತೆಂಬುದಕ್ಕೆ ಅಶೋಕನು ಬಿಟ್ಟುಹೋದ ಮೌರ್ಯಸಾಮ್ರಾಜ್ಯವೇ ಸಾಕ್ಷಿ. ಆ ಸಾಮ್ರಾಜ್ಯಕ್ಕೆ **'ಅಶೋಕಚಕ್ರ'** ಒಂದು ಸ್ಮಾರಕಚಿಹ್ನೆ.

# ಅಶೋಕ ಭಾರತ

(ಹಿರಿಯರ ಕನಸು)



ಎಲ್ಲಿ, ಅತ್ಯಂತ ದರಿದ್ರರಾದವರು ಕೂಡ 'ಇದು ನಮ್ಮ ದೇಶ, ಇದನ್ನು ರೂಪುಗೊಳಿಸುವುದರಲ್ಲಿ ನಮ್ಮ ಮಾತಿಗೂ ಬೆಲೆಯುಂಟು' ಎಂದುಕೊಳ್ಳುವರೋ—

ಎಲ್ಲಿನ ಜನರಲ್ಲಿ ಉಚ್ಚವರ್ಗ ನೀಚವರ್ಗ ಎಂಬುದು ಇರುವುದಿಲ್ಲವೋ—

ಎಲ್ಲಿ ಎಲ್ಲಾ ಮತದವರೂ ಸಂಪೂರ್ಣವಾದ ಅನ್ಯೋನ್ಯತೆಯಿಂದ ಇರುವರೋ—

—ಅಂತಹ ಭಾರತಕ್ಕಾಗಿ ನಾನು ಶ್ರಮಿಸುತ್ತೇನೆ.

ಅಂತಹ ಭಾರತದಲ್ಲಿ ಅಸ್ಪೃಶ್ಯತೆಯ ಕಾಟವಾಗಲಿ ಮಾದಕವಸ್ತುಗಳ ಪೀಡೆಯಾಗಲಿ ಇರಲು ಅವಕಾಶವಾಗದು.

ಅಲ್ಲಿ ಪುರುಷರಿಗೆ ಏನು ಹಕ್ಕೋ ಸ್ತ್ರೀಯರಿಗೂ ಅದೇ . . .

**ಇದು ನಾನು ಕನಸುಕಾಣುವ ಭಾರತ.**

—ಗಾಂಧೀಜಿ.

# ಅಶೋಕ ಭಾರತ

೧

ಸರಿಯಾಗಿ ಒಂದು ವರುಷದ ಹಿಂದೆ, ೧೯೪೭ನೇ ವರುಷದ ಜೂಲೈ ೨೨ನೇ ತಾರೀಕು, ಭಾರತ ರಾಜ್ಯಾಂಗಸಭೆಯ ಮುಂದೆ ಪ್ರಧಾನಿ ಪಂಡಿತ ನೆಹರು ಅವರು ಈ ಅಶೋಕಚಕ್ರಧ್ವಜವನ್ನು ಒಪ್ಪಿಸುತ್ತ, ಅದನ್ನು ಕುರಿತು ಈ ರೀತಿಯ ನಿರ್ಣಯ ವನ್ನು ಮಂಡಿಸಿದರು:

> "ಹೀಗೆಂದು ನಿರ್ಣಯವಾಗಿದೆ: ಭಾರತದ ರಾಷ್ಟ್ರಧ್ವಜವು ಒಂದು ಅಡ್ಡಗಲದ ತ್ರಿವರ್ಣವಾಗಿಯೂ ಅದರಲ್ಲಿ ಕೇಸರಿ, ಬಿಳುಪು, ಕರಿಯ ಹಸಿರು ಬಣ್ಣಗಳು ಸಮಪ್ರಮಾಣದಲ್ಲೂ ಇರತಕ್ಕದ್ದು. ಬಿಳಿಯ ಪಟ್ಟಿಯ ಮಧ್ಯಭಾಗದಲ್ಲಿ, ಚರಖದ ಪ್ರತಿನಿಧಿಯಾಗಿ ಒಂದು ಚಕ್ರವು ಸಾಗರನೀಲದ ವರ್ಣದಲ್ಲಿ ಇರತಕ್ಕದ್ದು. ಈ ಚಕ್ರದ ರಚನೆಯು ಸಾರನಾಥದ ಅಶೋಕಸ್ತಂಭದ ಸಿಂಹಶೀರ್ಷದ ಪೀಠದಲ್ಲಿ ಕಾಣುವ ಚಕ್ರದ ಮಾದರಿಯಾಗಿರತಕ್ಕದ್ದು. ಚಕ್ರದ ಅಡ್ಡಳತೆ ಹೆಚ್ಚುಕಡಮೆ ಬಿಳಿಯ ಪಟ್ಟಿಯ ಅಗಲದಷ್ಟು ಇರತಕ್ಕದ್ದು. ಬಾವುಟದ ಅಗಲಕ್ಕೂ ಉದ್ದಕ್ಕೂ ೨:೩ ಎಂಬ ಪ್ರಮಾಣ ಇರತಕ್ಕದು."

ಆ ಸಂದರ್ಭದಲ್ಲಿ ಮಾತನಾಡುತ್ತಾ ಅವರು ಹೀಗೆಂದರು:

> "ಈಗ ನಿಮ್ಮಲ್ಲಿ ನಾನು ಒಪ್ಪಿಸುತ್ತಿರುವ ಈ ಬಾವುಟವು ಸಾಮ್ರಾಜ್ಯದ ಬಾವುಟವಲ್ಲ, ನಿರಂಕುಶಪ್ರಭುತ್ವದ ಬಾವುಟವಲ್ಲ, ಯಾರಮೇಲೆಯೂ ಅಧಿಕಾರ ನಡಸುವ ಬಾವುಟವಲ್ಲ; ಇದು ಕೇವಲ ನಮಗೆ ಮಾತ್ರವಲ್ಲದೆ ಇದನ್ನು ಕಾಣಬಹುದಾದ ಎಲ್ಲಾ ಜನರಿಗೂ ಒಂದು ಸ್ವಾತಂತ್ರ್ಯದ ಚಿಹ್ನೆ—ಹೀಗೆಂದು ನನ್ನ ನಂಬಿಕೆ, ನನ್ನ ವಿಶ್ವಾಸ. ಇದು ಎಲ್ಲೆಲ್ಲಿ ಹೋಗಬಹುದೋ ಅಲ್ಲೆಲ್ಲಾ—ಎಲ್ಲೆಲ್ಲಿ ಭಾರತೀಯರು ವಾಸಿಸುತ್ತಿರು ವರೋ ಅಥವಾ ನಮ್ಮ ರಾಯಭಾರಿಗಳೂ ಮಂತ್ರಿಗಳೂ ಇರುವರೋ ಅಲ್ಲಿಗೆ ಮಾತ್ರವಲ್ಲದೆ ದೂರದ ಸಮುದ್ರಗಳಾಚೆ ಎಲ್ಲೆಲ್ಲಿ ಭಾರತದ ಹಡಗುಗಳು ಇದನ್ನು ಎತ್ತಿಹೋಗುವುವೋ ಅಲ್ಲೆಲ್ಲಾ ಆ ಜನರಿಗೆ ಸ್ವಾತಂತ್ರ್ಯದ ಸಂದೇಶವನ್ನು, ಸಾಹಚರ್ಯದ ಸಂದೇಶವನ್ನು, ಭಾರತವು ಪ್ರಪಂಚದ ಎಲ್ಲಾ ದೇಶಗಳೊಡನೆಯೂ ಸ್ನೇಹವನ್ನು ಆಶಿಸುತ್ತದೆ ಯಲ್ಲದೆ ಸ್ವಾತಂತ್ರ್ಯವಿಲ್ಲದ ಜನರಿದ್ದರೆ ಅವರಿಗೆ ಸಹಾಯಮಾಡಲು ಬಯಸುತ್ತದೆ ಎಂಬ ಸಂದೇಶವನ್ನು ಈ ಧ್ವಜವು ಒಯ್ಯುತ್ತದೆ ಎಂದು ನನ್ನ ನಂಬಿಕೆ."

ಪರರಿಗೆ ಅಡಿಯಾಳಾಗಿ ದಾಸ್ಯದಿಂದ ಆಗುವ ಶೋಕವನ್ನು ಅನುಭವಿಸಿದವರು, ಪರರಿಗೆ ಅಡಿಯಾಳಾಗುವ ಮೊದಲು ತಮ್ಮವರು ಅನುಭವಿಸುತ್ತಿದ್ದ ಅಶೋಕವನ್ನು ಓದಿ ತಿಳಿದವರು, ಕಳೆದುಕೊಂಡ ಆ ಸ್ವಾತಂತ್ರ್ಯದ ಅಶೋಕವನ್ನು ಮರಳಿ ಸಾಧಿಸಬೇಕೆಂದು ಅನೇಕ ದಶಕಗಳ ಕಾಲ ಸತ್ಯಅಹಿಂಸೆಗಳನ್ನು ಆಶ್ರಯಿಸಿ ಹೋರಾಡಿದವರು, ತಮ್ಮ ಹೋರಾಟವು ಜಯವನ್ನು ತಂದುಕೊಟ್ಟ ಕಾಲದಲ್ಲಿ ಇಂತಹ ಮಾತನ್ನಾಡಿದುದು ಏನೂ ಆಶ್ಚರ್ಯವಲ್ಲ. ಇದೂ ಅಲ್ಲದೆ ಯಾವ ಚರಖಚಿಹ್ನಾಂಕಿತವಾದ ತ್ರಿವರ್ಣಧ್ವಜದ ನೆರಳಿನಲ್ಲಿ ಒಂದು ಕಾಲುಶತಮಾನದ ಹೊತ್ತು ಕುಗ್ಗದೆ ಕಾದಾಡಿ, 'ನಿರಸ್ತ್ರರಣಜೈತ್ರ'ವನ್ನು ಸಾಧಿಸಿದರೋ ಆ ಧ್ವಜವನ್ನು ಈ ರೀತಿ ಕೊಂಡಾಡಿದುದೂ ಸಹಜವೇ. ಇದರ ಜೊತೆಗೆ, ಭಾರತದ ಪ್ರಾಚೀನ ಜೀವನದಲ್ಲಿ ಬೇರುಗಳನ್ನು ಇಳಿಯನಿಲ್ಲಿಸಿ, ವರ್ತಮಾನದಲ್ಲಿ ಸ್ಥಿರವಾಗಿ ಬೆಳೆದು, ಭವಿಷ್ಯತ್ತಿನಲ್ಲಿ ಕೊಂಬೆರೆಂಬೆಗಳನ್ನು ಹರಡಲು ಹವಣಿಸುತ್ತಿರುವ ಜೀವವು ಮೊದಲಿನ ಧ್ವಜದ ಚರಖಕ್ಕೆ ಬದಲಾಗಿ ಅಶೋಕನ ಸಂಬಂಧಿಯಾದ ಚಕ್ರವನ್ನು ಅಳವಡಿಸಿದ್ದು ನಮ್ಮ ಬಾವುಟದ ಭಾಗ್ಯ.

೨

ಇಂತಹ ಬಾವುಟದ ಅಡಿಯಲ್ಲಿ ಅಷ್ಟು ಕಾಲ ಹೋರಾಟ ನಡೆಸಿತಲ್ಲಾ ದೇಶ, ಆ ಹೋರಾಟದ ಉದ್ದೇಶವೇನು? ಸ್ವಾತಂತ್ರ್ಯವೇ ಇದರ ಉದ್ದೇಶ ಎನ್ನುತ್ತಿದ್ದೆವಲ್ಲಾ, ಈ ಸ್ವಾತಂತ್ರ್ಯದ ಅರ್ಥವೇನು?—ಎಂಬುದು ತಿಳಿಯಬೇಕಾದರೆ ೧೯೩೦ನೇ ಇಸವಿ ಜನವರಿ ೨೬ನೇ ತಾರೀಕಿನಿಂದ ಪ್ರತಿವರ್ಷವೂ ಜಪಿಸುತ್ತಿದ್ದ ಆ 'ಸ್ವಾತಂತ್ರ್ಯದ ಪ್ರತಿಜ್ಞಾಕ್ಷರ'ಗಳನ್ನು ಜ್ಞಾಪಿಸಿಕೊಳ್ಳಬೇಕು.

> "ಸ್ವಾತಂತ್ರ್ಯವನ್ನು ಹೊಂದಿ, ತಮ್ಮ ದುಡಿಮೆಯ ಫಲಗಳನ್ನು ಸವಿದು, ಜೀವನಕ್ಕೆ ಅಗತ್ಯವಾದವುಗಳನ್ನು ಪಡೆದು, ತಮ್ಮ ಬೆಳವಣಿಗೆಗೆ ಸಂಪೂರ್ಣವಾದ ಅವಕಾಶಗಳನ್ನು ಹೊಂದುವುದು ಬೇರೆ ಇತರ ಜನಗಳಿಗೆ ಹೇಗೋ ಹಾಗೆಯೇ ಭಾರತದ ಜನರಿಗೂ ಅದು ಬಿಟ್ಟು ಕಳೆಯಲಾರದ ಹಕ್ಕು ಎಂದು ನಾವು ನಂಬಿದ್ದೇವೆ. ಯಾವ ಸರಕಾರವಾದರೂ ಜನರ ಈ ಹಕ್ಕುಗಳನ್ನು ಹೋಗಲಾಡಿಸಿ ಅವರನ್ನು ಪೀಡಿಸಿದರೆ, ಆ ಸರಕಾರವನ್ನು ಬದಲಾಯಿಸುವುದಕ್ಕೆ ಅಥವಾ ತೆಗೆದುಬಿಡುವುದಕ್ಕೆ ಜನರಿಗೆ ಇನ್ನೂ ಮುಂದಿನ ಹಕ್ಕು ಇದೆ ಎಂಬುದಾಗಿಯೂ ನಂಬಿದ್ದೇವೆ. ಭಾರತದಲ್ಲಿನ ಬ್ರಿಟಿಷ್ ಸರಕಾರವು ಭಾರತದ ಜನರ ಸ್ವಾತಂತ್ರ್ಯ

ವನ್ನು ಹೋಗಲಾಡಿಸಿದುದು ಮಾತ್ರವಲ್ಲ, ಜನಸಾಮಾನ್ಯರನ್ನು ಸ್ವಪ್ರಯೋಜನಕ್ಕಾಗಿ ಸುಲಿಯುವುದರಲ್ಲಿಯೇ ನಿರತವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕವಾಗಿ ಭಾರತವನ್ನು ನಾಶಗೊಳಿಸಿದೆ. ಆದಕಾರಣ, ಭಾರತವು ಬ್ರಿಟಿಷ್ ಸಂಬಂಧವನ್ನು ಕಡಿದು, ಪೂರ್ಣ ಸ್ವರಾಜ್ಯವನ್ನು ಎಂದರೆ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯಬೇಕು ಎಂದು ನಾವು ನಂಬಿದ್ದೇವೆ.

ಆರ್ಥಿಕವಾಗಿ ಭಾರತವನ್ನು ಹಾಳುಮಾಡಿದ್ದಾರೆ. ನಮ್ಮ ಜನಗಳಿಂದ ದೊರಕಿಸಿಕೊಳ್ಳುವ ರಾಜ್ಯಾದಾಯವು ನಮ್ಮ ಆದಾಯದ ಪ್ರಮಾಣಕ್ಕಿಂತ ಮಿತಿ ಮೀರಿದೆ. . .

ರಾಟೆಯಿಂದ ನೂಲುವುದೇ, ಮೊದಲಾದ ಗ್ರಾಮ ಕೈಗಾರಿಕೆಗಳನ್ನು ನಾಶಮಾಡಿದುದರಿಂದ ರೈತಾಪಿ ಜನ ವರ್ಷಕ್ಕೆ ಕಡೆಯಪಕ್ಷ ನಾಲ್ಕು ತಿಂಗಳಾದರೂ ಕೆಲಸವಿಲ್ಲದೆ ಸೋಮಾರಿಗಳಾಗಿರುತ್ತಾರೆ. ಕೈಕೆಲಸಗಳಿಲ್ಲದೆ ಅವರ ಬುದ್ಧಿ ಮಂಕಾಗುತ್ತಿದೆ. ಹೀಗೆ ನಾಶಮಾಡಿದ ಕಸಬುಗಳಿಗೆ ಬದಲಾಗಿ, ಇತರ ದೇಶಗಳಲ್ಲಿರುವಂತೆ, ಬೇರೆ ಕಸಬುಗಳನ್ನು ಒದಗಿಸಿಲ್ಲ.

ಸುಂಕ, ಹಣದ ಚಲಾವಣೆ ಇವುಗಳನ್ನು ಹಾಗೆ ಹೀಗೆ ಸವರಿಸಿ ರೈತಾದಿಗಳ ಮೇಲೆ ಇನ್ನಷ್ಟು ಭಾರ ಹೇರಿದ್ದಾರೆ. ನಮ್ಮ ಆಮದುಗಳಲ್ಲಿ ಬ್ರಿಟಿಷರು ತಯಾರಿಸಿದ ವಸ್ತುಗಳೇ ಹೆಚ್ಚುಪಾಲು. ಸುಂಕದ ತೆರಿಗೆಗಳನ್ನು ನೋಡಿದರೆ, ಬ್ರಿಟಿಷ್ ಉತ್ಪತ್ತಿಕಾರರ ಕಡೆಗೆ ಪಕ್ಷಪಾತವಿರುವುದು ಸ್ಪಷ್ಟವಾಗಿದೆ; ಅದರಿಂದ ಬರುವ ರಾಜ್ಯಾದಾಯವನ್ನು ಸಾಮಾನ್ಯಜನರ ಭಾರವನ್ನು ಕಡಿಮೆಮಾಡಲು ಬಳಸುತ್ತಿಲ್ಲ, ಅತ್ಯಂತ ವಿಪರೀತವಾದ ಅಧಿಕಾರಿವರ್ಗವನ್ನು ಪೋಷಿಸಲು ಬಳಸುತ್ತಿದ್ದಾರೆ. ಇದಕ್ಕಿಂತ ಮನಃಸ್ವೇಚ್ಛೆಯಾದುದು ಎಂದರೆ— ನಾಣ್ಯಗಳ ವಿನಿಮಯದ ಪರಸ್ಪರ ಪ್ರಮಾಣದ ಸವರಣೆ. ಇದರಿಂದ ಕೋಟ್ಯಂತರ ದ್ರವ್ಯ ಈ ದೇಶದಿಂದ ಬಸಿದುಹೋಗಿದೆ.

ರಾಜಕೀಯವಾಗಿ, ಬ್ರಿಟಿಷರ ಆಳಿಕೆಯಲ್ಲಿ ಭಾರತದ ಘನತೆ ಇಳಿದುಹೋದಷ್ಟು ಯಾವಾಗಲೂ ಆಗಿರಲಿಲ್ಲ. ಯಾವ ಸುಧಾರಣೆಗಳೂ ನಿಜವಾದ ರಾಜಕೀಯಾಧಿಕಾರವನ್ನು ಜನಗಳಿಗೆ ಕೊಟ್ಟಿಲ್ಲ. ನಮ್ಮಲ್ಲಿ ಅತ್ಯುನ್ನತರಾದವರು ಕೂಡ ಪರಕೀಯರ ದರ್ಪದೆದುರು ಬಗ್ಗಬೇಕಾಗಿದೆ. ನಿರಾತಂಕದಿಂದ ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ,

ಅಡ್ಡಿಯಿಲ್ಲದೆ ಬೇಕಾದವರ ಸಂಪರ್ಕ ಪಡೆಯುವ ಹಕ್ಕು ನಮಗೆ ಇಲ್ಲವಾಗಿದೆ. ನಮ್ಮ ನಾಡವರು ಅನೇಕರು ದೇಶಭ್ರಷ್ಟರಾಗಿರಬೇಕಾಗಿದೆ, ಅವರು ತಮ್ಮ ಮನೆಗಳಿಗೆ ಹಿಂದಿರುಗಲು ಸಾಧ್ಯವಿಲ್ಲವಾಗಿದೆ. ಆಡಳಿತ ನಡೆಸುವ ಹುಟ್ಟುಸಾಮರ್ಥ್ಯದ ಕೊಲೆಯಾಗಿ, ಜನರು ಸಣ್ಣ ಗ್ರಾಮದ ಕಚೇರಿಗಳಲ್ಲಿಯೂ ಗುಮಾಸ್ತೆತನಗಳಲ್ಲಿಯೂ ತೃಪ್ತಿಪಡಬೇಕಾಗಿದೆ.

ಸಾಂಸ್ಕೃತಿಕವಾಗಿ, ಈ ವಿದ್ಯಾಭ್ಯಾಸದ ಕ್ರಮದಿಂದ ನಮಗೆ ನೆಲೆ ತಪ್ಪಿದೆ. ನಮ್ಮ ಶಿಕ್ಷಣದ ಫಲವಾಗಿ ನಮ್ಮನ್ನು ಬಿಗಿದಿರುವ ಸಂಕಲೆಗಳನ್ನೇ ನಾವು ತಬ್ಬಿಕೊಳ್ಳುವ ಹಾಗಾಗಿದೆ.

ಆಧ್ಯಾತ್ಮಿಕವಾಗಿ, ಬಲಾತ್ಕಾರದ ನಿಶ್ಶಸ್ತ್ರೀಕರಣದಿಂದ ಪೌರುಷವಿಲ್ಲದವರಾಗಿದ್ದೇವೆ. ಪರಸೈನ್ಯವು ಬಂದು ಇಲ್ಲಿ ಆಕ್ರಮಿಸಿಕೊಂಡು, ಪ್ರತಿಭಟಿಸುವ ನಮ್ಮ ಚೇತನವನ್ನು ಹೊಸಗಿ ನಿರ್ನಾಮಮಾಡಲು ಆಸಕ್ತವಾಗಿರುವುದರಿಂದ ' ನಾವು ನಮ್ಮನ್ನು ರಕ್ಷಿಸಿಕೊಳ್ಳಲಾರೆವು, ಪರರ ದುರಾಕ್ರಮಣಕ್ಕೆ ಎದುರುನಿಲ್ಲಲಾರೆವು, ಕಳ್ಳರು ಕಾಕರು ಪುಂಡರು ಇವರು ಮೇಲೆ ಬಿದ್ದಾಗ ನಮ್ಮ ಮನೆಗಳನ್ನೂ ಸಂಸಾರವನ್ನೂ ರಕ್ಷಿಸಲು ಕೂಡ ಆರೆವು ' ಎಂದು ಎನ್ನಿಸಿಬಿಟ್ಟಿದೆ.

ನಮ್ಮ ದೇಶಕ್ಕೆ ಈ ನಾಲುಮಡಿಯ ಹಾನಿಯನ್ನು ಉಂಟುಮಾಡಿದ ಆಡಳಿತಕ್ಕೆ ಇನ್ನು ಹೆಚ್ಚುಕಾಲ ಒಳಗಾಗಿರುವುದು ಮಾನವದ್ರೋಹ, ದೈವದ್ರೋಹ ಎಂದು ನಮ್ಮ ದೃಢವಾದ ಭಾವನೆ. ಆದರೂ ನಮ್ಮ ಸ್ವಾತಂತ್ರ್ಯವನ್ನು ಪಡೆಯುವುದಕ್ಕೆ ತುಂಬ ಪರಿಣಾಮಕಾರಿಯಾದ ಮಾರ್ಗವು ಹಿಂಸೆಯ ಮೂಲಕ ಅಲ್ಲ ಎಂದು ನಾವು ಅರಿತಿದ್ದೇವೆ. ಆದುದರಿಂದ ನಾವು ಸಾಧ್ಯವಾದಷ್ಟು ಮಟ್ಟಿಗೆ, ಬ್ರಿಟಿಷ್ ಸರಕಾರದೊಡನೆ ನಾವಾಗಿಯೇ ಹೊಂದಿರುವ ಸಂಬಂಧವನ್ನು ಹಿಂತೆಗೆದುಕೊಂಡು ಸಿದ್ಧರಾಗುತ್ತೇವೆ. ವಿನಯಬದ್ಧವಾದ ಶಾಸನಭಂಗಕ್ಕೂ ಕರನಿರಾಕರಣಕ್ಕೂ ಸಿದ್ಧರಾಗುತ್ತೇವೆ. ನಾವು ಮಾತ್ರ, ನಾವಾಗಿ ಕೊಡುವ ಸಹಾಯವನ್ನು ಹಿಂತೆಗೆದುಕೊಂಡು ಕರ ಕೊಡುವುದನ್ನು ನಿಲ್ಲಿಸಿ, ಕೆಣಕಿದಾಗಲೂ ಹಿಂಸೆಗೆ ಕೈಯಿಕ್ಕದಿದ್ದರೆ, ಈ ವಿಮಾನುಷನಾದ ಆಳಿಕೆಯು ಕೊನೆಗಾಣುವುದು ಖಂಡಿತ ಎಂದು ನಮಗೆ ಖಚಿತವಾಗಿದೆ. ಅದ್ದರಿಂದ ನಾವು, ಪೂರ್ಣ ಸ್ವರಾಜ್ಯದ ಸ್ಥಾಪನೆಯ ಉದ್ದೇಶದಿಂದ ಕಾಂಗ್ರೆಸ್ಸು ಕಾಲಕಾಲಕ್ಕೆ ಹೇಳುವ ತಿಳಿವಳಿಕೆಗಳನ್ನು ನಡಸುತ್ತೇವೆ ಎಂದು ಈ ಮೂಲಕವಾಗಿ ಪವಿತ್ರಭಾವನೆಯಿಂದ ನಿಶ್ಚಯಮಾಡುತ್ತೇವೆ."

ಹದಿನೆಂಟು ವರ್ಷಗಳು ಹಳೆಯದಾಗಿರುವ ಈ ಸ್ವಾತಂತ್ರ್ಯಪ್ರತಿಜ್ಞೆಯನ್ನು ಈಗಲೂ, ಎಂದರೆ ಭಾರತವು ಬ್ರಿಟಿಷರಿಂದ ಬಿಡುಗಡೆ ಹೊಂದಿರುವಾಗಲೂ, ಇಷ್ಟು ದೀರ್ಘವಾಗಿ ಜ್ಞಾಪಿಸಿಕೊಳ್ಳುವುದಕ್ಕೆ ಕಾರಣ ಇಷ್ಟೆ: ಆ ಪ್ರತಿಜ್ಞೆ ಇನ್ನೂ ಪೂರ್ಣ ವಾಗಿಲ್ಲ. ಯಾವುದನ್ನು **ಪೂರ್ಣ ಸ್ವರಾಜ್ಯ** ಎಂದು ಕರೆದೆವೋ ಅದು ಇನ್ನೂ ಕರಗತವಾಗಿಲ್ಲ. ನಿಜ, ಬ್ರಿಟಿಷರು ನಮ್ಮ ದೇಶವನ್ನು ನಮಗೆ ಬಿಟ್ಟುಕೊಡುವ ಹಾಗೆ ನಡೆದುಕೊಂಡು, ರಾಜಕೀಯ ಸ್ವರಾಜ್ಯವನ್ನು ಪಡೆದಿದ್ದೇವೆ. ಅದನ್ನು ಪಡೆಯುವುದಕ್ಕೆ ಅತ್ಯಗತ್ಯವಾದ 'ನಿರ್ಭಯ' ಎಂಬ ಆಧ್ಯಾತ್ಮಿಕ ಸ್ವಾರಾಜ್ಯವನ್ನು ಮಹಾತ್ಮರ ನೇತೃತ್ವದಲ್ಲಿ ಗಳಿಸಿಕೊಂಡಿದ್ದೇವೆ. ಆದರೆ ರಾಜಕೀಯ ಸ್ವಾತಂತ್ರ್ಯಕ್ಕೆ ಫಲವಾದ ಆರ್ಥಿಕ ಉನ್ನತಿ ಇನ್ನೂ ನಮಗೆ ಲಭಿಸಿಲ್ಲ; ನಿರ್ಭೀತಿಯಿಂದ ನಡೆದರೆ ಬರಬೇಕಾದ ಸಂಸ್ಕಾರ ನಮ್ಮ ಸಮಾಜದಲ್ಲಿ ಇನ್ನೂ ಬೆಳೆಯಬೇಕಾಗಿದೆ. ಈ ಎರಡೂ ಅರಕೆಗಳು ಪೂರೈಸುವ ವರೆಗೂ ನಮ್ಮ ಹೋರಾಟ ನಿಲ್ಲುವಂತಿಲ್ಲ. ಅದ್ದರಿಂದಲೇ ಬ್ರಿಟಿಷರ ಮುಷ್ಟಿಯಿಂದ ನಾವು ಪಾರಾಗಿದ್ದರೂ ಈ ಪ್ರತಿಜ್ಞಾಕ್ಷರಗಳನ್ನು ಮರೆಯುವುದು ನಮಗೇ ಕ್ಷೇಮವಲ್ಲ.

೩

ಈ ಸ್ವಾತಂತ್ರ್ಯಪ್ರತಿಜ್ಞೆಯಲ್ಲಿ ನಾವು ಜ್ಞಾಪಿಸಿಕೊಳ್ಳುತ್ತಿದ್ದ 'ನಾಲ್ಕು ಹಾನಿ'ಗಳನ್ನು ಓದಿದಾಗಲೆಲ್ಲ ನನಗೆ ಬುದ್ಧಗುರು ಹೇಳಿದ 'ನಾಲ್ಕು ಆರ್ಯಸತ್ಯ'ಗಳ ನೆನಪಾಗುತ್ತದೆ.

"ಲೋಕದಲ್ಲಿ ದುಃಖವುಂಟು, ಆ ದುಃಖಕ್ಕೆ ಕಾರಣವುಂಟು, ಆ ಕಾರಣವನ್ನು ತಿಳಿದು ಕಳೆದರೆ ದುಃಖ ನಾಶವಾಗುತ್ತದೆ, ದುಃಖಕ್ಕೆ ಕಾರಣವಾದುದನ್ನು ಕಳೆಯುವುದಕ್ಕೆ ಇದು ಮಾರ್ಗ" ಎಂದು ಬುದ್ಧನು ತನ್ನ ಪ್ರಥಮ ಧರ್ಮಚಕ್ರಪ್ರವರ್ತನದಲ್ಲಿ ಬೋಧಿಸಿದನು. ದುಃಖವನ್ನು ಹೋಗಲಾಡಿಸುವ ಆ ಮಾರ್ಗವನ್ನು 'ಆರ್ಯ ಅಷ್ಟಾಂಗಿಕ ಮಾರ್ಗ' ಎಂದು ಕರೆದನು. ಆ ಮಾರ್ಗದ ಮೂಲಕವಾಗಿ ದುಃಖವನ್ನು ನಿರ್ಮೂಲಮಾಡಿ ಪಡೆದ **ಅಶೋಕ**ದ ಸ್ಥಿತಿಯನ್ನು 'ನಿರ್ವಾಣ' ಎಂದನು.

ದಾಸ್ಯದಲ್ಲಿದ್ದ ನಮಗೆ ಈ ಸ್ವಾತಂತ್ರ್ಯ ಪ್ರತಿಜ್ಞೆಯೇ 'ಧರ್ಮಚಕ್ರ ಪ್ರವರ್ತನ ಸೂತ್ರ.' 'ಪೂರ್ಣ ಸ್ವರಾಜ್ಯ'ವೇ ನಾವು ಎದುರುನೋಡುವ 'ನಿರ್ವಾಣ'. ಇದನ್ನು

ಸಾಧಿಸುವುದಕ್ಕೋಸ್ಕರವಾಗಿಯೇ ಬುದ್ಧ ಕಲ್ಪರಾಸ ಮಹಾತ್ಮರು ತಮ್ಮ 'ಹದಿಮೂರು ಅಂಗಗಳ ರಚನಾತ್ಮಕ ಕಾರ್ಯಕ್ರಮ'ದ ರಾಜಮಾರ್ಗವನ್ನು ನಮಗೆ ತೋರಿಸಿದರು.

ಹಿಂದೂ-ಮುಸ್ಲಿಂ ಅಥವಾ ಈ ಮತ ಆ ಮತ ಎಂಬ ಭಿನ್ನಭಾವವಿಲ್ಲದೆ, ಭಾರತದವರೆಲ್ಲ ಒಂದು ಎಂಬ ಏಕಭಾವ ಬರಬೇಕು; ಹಿಂದುಗಳಲ್ಲಿ ಕೆಲವರನ್ನು ಅಸ್ಪೃಶ್ಯರೆಂದು ಆಚೆ ಸರಿಸುವುದು ತಪ್ಪಿ, ಅವರನ್ನೂ ನಮ್ಮಂತೆಯೇ ಕಾಣಬೇಕು; ಕುಡಿತದಿಂದ ಆಗುವ ದ್ರವ್ಯಹಾನಿಯೂ ದೇಹದ್ರೋಹವೂ ನಿಂತು, ಸಮಾಜ ಶುದ್ಧವಾಗಬೇಕು; ಅವರವರಿಗೆ ಬೇಕಾದ ವಸ್ತ್ರಗಳಿಗೆ ಏನೂ ಕೊರತೆಯಾಗದ ಹಾಗೆ, ಬಡವರಿಗೆ ಅದರಿಂದ ನಾಲ್ಕು ಕಾಸು ಸಂಪಾದನೆಯಾಗುವ ಹಾಗೆ ಕೈರಾಟೆಯಿಂದ ನೂಲುತೆಗೆದು ಮಾಡಿದ ಖಾದಿಯನ್ನು ಪ್ರೋತ್ಸಾಹಿಸಬೇಕು; ಅದರಂತೆಯೇ ಇತರ ಗ್ರಾಮೋದ್ಯಮಗಳನ್ನು ಉದ್ಧರಿಸಿ ಸ್ವಾವಲಂಬಿಗಳಾಗಬೇಕು; ಹಿಂದೆಬಿದ್ದು ಹಾಳಾಗುತ್ತಿರುವ ಹಳ್ಳಿಗಳ ನೈರ್ಮಲ್ಯಕ್ಕೂ ಆರೋಗ್ಯಕ್ಕೂ ಹೆಚ್ಚು ಗಮನ ಕೊಡಬೇಕು; ಬದುಕಿನಿಂದ ದೂರವಾದ ಬರಿಯ ಓದನ್ನು ಕಲಿಸುತ್ತಿರುವ ಈಗಿನ ಶಿಕ್ಷಣಕ್ರಮಕ್ಕೆ ಬದಲಾಗಿ ಬದುಕಿಗೆ ಸಾರ್ಥಕವಾಗುವಂತಹ ಓದನ್ನು ಕಲಿಸುವ ಹೊಸ ಶಿಕ್ಷಣಕ್ರಮವನ್ನು ರೂಢಿಸಬೇಕು; ಅಕ್ಷರ ಬಾರದ ವಯಸ್ಕರಿಗೂ ಅಕ್ಷರ ಓದು ಕಲಿಸಬೇಕು; ವಿದ್ಯೆಯಲ್ಲೂ ಬುದ್ಧಿಯಲ್ಲೂ ಕಾರ್ಯದಲ್ಲೂ ಸ್ತ್ರೀಯರು ಪುರುಷರಿಗೆ ಸಮಾನರಾಗುವಂತೆ ಅವಕಾಶ ಕಲ್ಪಿಸಬೇಕು; ಜನರು ತಮ್ಮ ಸುತ್ತುಮುತ್ತನ್ನು ಸ್ವಚ್ಛವಾಗಿ ಇಟ್ಟುಕೊಳ್ಳುವಂತೆಯೂ ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳುವಂತೆಯೂ ಕಲಿಸಬೇಕು; ಇಷ್ಟು ದೊಡ್ಡ ದೇಶದಲ್ಲಿ ಎಲ್ಲರಿಗೂ ಅರ್ಥವಾಗುವಂತಹ ಒಂದು ಏಕೈಕ ರಾಷ್ಟ್ರಭಾಷೆ ಆಗಬೇಕು; ಹಿಂದಿನಿಂದ ಬೆಳೆದುಬಂದಿರುವ ವಿವಿಧವಾದ ದೇಶಭಾಷೆಗಳಲ್ಲಿ ಇನ್ನೂ ಹೆಚ್ಚಿನ ಪ್ರೇಮವನ್ನು ತಾಳಬೇಕು; ಮತ್ತು ಕಡೆಯದಾಗಿ, ಎಲ್ಲರಿಗೂ ಹೊಟ್ಟೆಗೂ ಬಟ್ಟೆಗೂ ನೀರಿಗೂ ನೆರಳಿಗೂ ಬೆಳಕಿಗೂ ಬಯಲಿಗೂ ಏನೂ ಕಾರ್ಪಣ್ಯವಿಲ್ಲದ ಹಾಗೆ ಎಲ್ಲರಿಗೂ ಒಂದು ಆರ್ಥಿಕಸಮಾನತೆ ಬರುವಂತೆ ಶ್ರಮಿಸಬೇಕು—ಎಂಬ ಈ ರೀತಿಯಾದ ಹದಿಮೂರು ಅಂಗಗಳನ್ನು ಸಾಧಿಸುವುದು ಹೇಗೆ ಎಂಬುದರ ಬಗ್ಗೆ ಗಾಂಧಿಯವರು ಇದ್ದಷ್ಟು ಕಾಲವೂ ಪುನಃಪುನಃ ಹೇಳಿದ್ದಾರೆ.

ಈ ಕಾರ್ಯಕ್ರಮದಲ್ಲಿ ಅಂಗಗಳನ್ನು **ಹದಿಮೂರು** ಎಂದಿರುವುದು ಸುಮ್ಮನೆ ಸೌಕರ್ಯಕ್ಕಾಗಿ. ಈ ಹದಿಮೂರನ್ನು ಹಿಡಿದು ಕೆಲಸಮಾಡಹೊರಟರೆ, ಅದರಲ್ಲಿ ಪ್ರತಿ

ಯೊಂದರ ಒಳಗೂ ಅನೇಕ ಉಪಾಂಗಗಳು ಅಡ್ಡಬಂದು, 'ಪರಿಹರಿಸಿ ಮುಂದೆ ಹೋಗು' ಎಂದು ಕೇಳುತ್ತವೆ. ನಾಡಿಗೆ ಶೋಕವನ್ನು ತಂದೊಡ್ಡುವ ದುಷ್ಟಪದ್ಧತಿಗಳು ಎಷ್ಟು ಉಂಟೋ ಅಷ್ಟನ್ನೂ ಎದುರಿಸುತ್ತಾ ಹೋಗಬೇಕೆಂಬುದು ಈ ಮಾರ್ಗದ ಅನ್ವಯ. ಹಾಗೆ ಮಾಡಿದಾಗ ಮಾತ್ರ **ಅ-ಶೋಕಭಾರತ**ದ ಸಿದ್ಧಿ.

೪

ಭಾರತವು ತನ್ನನ್ನು ಆಕ್ರಮಿಸಿದ ಪರಕೀಯರಿಗೆ ಹೆದರುತ್ತಿದ್ದಷ್ಟು ಕಾಲವೂ ಅದು ರಾಜಕೀಯ ದಾಸ್ಯದಲ್ಲಿತ್ತು. ಅದು ನಿರ್ಭೀತವಾದ ಹಾಗೆಲ್ಲಾ ಆ ದಾಸ್ಯ ಸಡಲಿಬೀಳುತ್ತಾ ಬಂತು. ೧೯೪೭ರ ಆಗಸ್ಟ್ ೧೫ರ ಉದಯದೊಡನೆಯೇ ಭಾರತದ ರಾಜಕೀಯ ಸ್ವಾತಂತ್ರ್ಯವೂ ಉದಯವಾಗುತ್ತದೆ ಎಂಬುದು ನಿಶ್ಚಯವಾದ ಕೂಡಲೆ, "ರಾಜ್ಯದ ಆಡಳಿತ ನಮ್ಮ ಕೈಗೆ ಬಂದರೆ ನಾವು ಹೇಗೆ ನಮ್ಮ ಸ್ವರಾಜ್ಯವನ್ನು ರೂಪಿಸಿಕೊಳ್ಳಬೇಕು" ಎಂಬುದನ್ನು ನಿರ್ಣಯಿಸುವುದಕ್ಕಾಗಿ ಆರು ತಿಂಗಳ ಮೊದಲೇ ರಾಜ್ಯಾಂಗರಚನಾಸಭೆ ಸೇರಿ, ಚರ್ಚಿಸಿ, ೧೯೪೭ರ ಜನವರಿ ೨೨ನೆಯ ತಾರೀಕು ತನ್ನ ಉದ್ದೇಶಗಳ ನಿರ್ಣಯವನ್ನು ಘೋಷಣೆ ಮಾಡಿತು. ದಾಸ್ಯದಲ್ಲಿದ್ದ ದೇಶ ಅದುವರೆಗೆ ಏನು ವಿಮೋಚನೆಯ ಕನಸು ಕಾಣುತ್ತಿದ್ದಿತೋ ಅದನ್ನು ರಾಜ್ಯಶಾಸ್ತ್ರದ ನಿಷ್ಕೃಷ್ಟವಾದ ಭಾಷೆಯಲ್ಲಿ ಕಟ್ಟಿ ಹೇಳಿತು.

> "ಭಾರತವು ಸ್ವತಂತ್ರವಾದ, ಪರಮಾಧಿಕಾರವುಳ್ಳ ಜನತಾರಾಜ್ಯವಾಗಬೇಕು; ತನ್ನ ರಾಜ್ಯವ್ಯವಸ್ಥೆಯನ್ನು ಅದು ತಾನೇ ರಚಿಸಿಕೊಳ್ಳಬೇಕು—ಎಂಬುದು ಈ ರಾಜ್ಯಾಂಗಸಭೆಯ ದೃಢವಾದ ಗಂಭೀರವಾದ ಸಂಕಲ್ಪ.
>
> "ಈಗ ಬ್ರಿಟಿಷ್ ಇಂಡಿಯಾ ಎಂದಾಗಿರುವ ಪ್ರಾಂತಗಳೂ, ಈಗ ಸಂಸ್ಥಾನಗಳೆನ್ನಿಸಿರುವ ಪ್ರಾಂತಗಳೂ, ಬ್ರಿಟಿಷ್ ಇಂಡಿಯಕ್ಕೂ ಭಾರತಕ್ಕೂ ಸೇರದಿರುವ ಇತರ ಪ್ರಾಂತಗಳೂ, ಇದಲ್ಲದೆ, ಸ್ವತಂತ್ರವಾದ ಪರಮಾಧಿಕಾರದ ಭಾರತದಲ್ಲಿ ಅಂಗವಾಗಿ ಸೇರಲು ಇಷ್ಟಪಡುವ ಇತರ ಪ್ರಾಂತಗಳೂ ಸೇರಿ ಒಂದು ಒಕ್ಕೂಟವಾಗತಕ್ಕದ್ದು;
>
> "ಮೇಲೆ ಹೇಳಿದ ಪ್ರಾಂತಗಳಿಗೆ ಈಗಿರುವ ಮೇರೆ ಇರಬಹುದು, ಅಥವಾ ರಾಜ್ಯಾಂಗಸಭೆ ನಿರ್ಣಯಿಸುವ ಬೇರೆ ಮೇರೆಯಾಗಬಹುದು. ಅದು ಹೇಗಾದರೂ, ತನ್ನ ಸ್ವಯಂಅಧಿಕಾರವನ್ನು ಇರಿಸಿ ಉಳಿಸಿ

ಕೊಂಡು, ಭಾರತದ ಒಕ್ಕೂಟಕ್ಕೆ ಸೇರಿದುದರಿಂದ ಅದಕ್ಕೆ ಒಪ್ಪಿಸಿದ ಅಥವಾ ವಹಿಸಿದ ಅಧಿಕಾರಗಳು ಹೊರತಾಗಿ ಉಳಿದ ಶೇಷಾಧಿಕಾರಗಳನ್ನು ತಾನು ಆಡಳಿತದಲ್ಲಿ ಪ್ರಯೋಗಿಸತಕ್ಕದ್ದು;

"ಈ ಸ್ವತಂತ್ರವಾದ ಪರಮಾಧಿಕಾರದ ಭಾರತವೂ ಅದರ ಪ್ರತ್ಯಂಗಗಳೂ ಆಡಳಿತದ ಮುಖಗಳೂ ತಮ್ಮ ಪ್ರಭುತ್ವವನ್ನೂ ಅಧಿಕಾರವನ್ನೂ ಪ್ರಜೆಗಳಿಂದ ಪಡೆಯತಕ್ಕದ್ದು ;

"ಸಾಮಾಜಿಕ, ಆರ್ಥಿಕ, ರಾಜಕೀಯ ಈ ವಿಷಯಗಳಲ್ಲಿ ಸರ್ವಸಮಾನವಾದ ಅಂತಸ್ತು, ಸಮಾನವಾದ ಅವಕಾಶ, ಸಮಾನವಾದ ನ್ಯಾಯವಿವರಣೆ; ಶಾಸನಬದ್ಧವಾಗಿ, ಜನರ ನೀತಿನಡತೆಗಳಿಗೆ ವಿರೋಧವಾಗದಹಾಗೆ ವಿಚಾರ, ಉಚ್ಚಾರ, ನಂಬಿಕೆ, ಶ್ರದ್ಧೆ, ಪೂಜೆ, ವೃತ್ತಿ, ಸಹವಾಸ, ಕರ್ಮ ಇವುಗಳಿಗೆ ಸ್ವಾತಂತ್ರ್ಯವಿರುವುದೆಂದು ಭರವಸೆ ಕೊಟ್ಟು, ಅದನ್ನು ದೊರಕಿಸಿಕೊಡತಕ್ಕದ್ದು;

"ಅಲ್ಪಸಂಖ್ಯಾತರಿಗೂ, ಹಿಂದುಳಿದವರಿಗೂ, ನಾಗರಿಕತೆಯಿಂದ ದೂರವಿರುವ ಪ್ರದೇಶಗಳವರಿಗೂ, ನಿಮ್ನವರ್ಗಕ್ಕೂ ಹಿಂದುಳಿದ ವರ್ಗಕ್ಕೂ ಸಾಕಷ್ಟು ರಕ್ಷಣೆಗಳನ್ನು ಒದಗಿಸತಕ್ಕದ್ದು;

"ಈ ಜನತಾರಾಜ್ಯದ ಸಮಗ್ರತೆಯನ್ನೂ ಭದ್ರತೆಯನ್ನೂ ಭೂಮಿ ಸಮುದ್ರ ಆಕಾಶಗಳಲ್ಲಿ ಇದಕ್ಕಿರುವ ಪರಮಾಧಿಕಾರದ ಹಕ್ಕುಗಳನ್ನೂ ನಾಗರಿಕರಾಷ್ಟ್ರಗಳ ನ್ಯಾಯನೀತಿಗಳಿಗೆ ಅನುಸಾರವಾಗಿ ಉಳಿಸಿಕೊಳ್ಳತಕ್ಕದ್ದು;

"ಈ ಪ್ರಾಚೀನದೇಶವು ಪ್ರಪಂಚದಲ್ಲಿ ತನಗೆ ಸಲ್ಲಬೇಕಾದ ಗೌರವಸ್ಥಾನವನ್ನು ಪಡೆಯಲಿ. ಜಗತ್ತಿನ ಶಾಂತಿಯೂ ಮಾನವವರ್ಗದ ಕಲ್ಯಾಣವೂ ಅಧಿಕವಾಗುವಂತೆ ತನ್ನ ನೆರವನ್ನು ತಾನೇ ಇಷ್ಟಪಟ್ಟು ತುಂಬಾ ನೀಡಲಿ."

—ಹೀಗೆಂದು, ಇನ್ನು ಎಂಟು ತಿಂಗಳಿನಲ್ಲಿ ಸ್ವತಂತ್ರವಾಗುವೆನೆಂದು ನಿಶ್ಚಯಗೊಂಡ ಭಾರತವು ತನ್ನ ರಾಜ್ಯಾಂಗಸಭೆಯ ಮೂಲಕ ತನ್ನ ಉದ್ದೇಶಗಳ ನಿರ್ಣಯವನ್ನು ಪ್ರಕಟಮಾಡಿತು.

ಈ ಉದ್ದೇಶಗಳನ್ನು ಸಫಲಗೊಳಿಸಿ ನಾಡನ್ನು ಅಶೋಕವನ್ನಾಗಿ ಮಾಡಿಕೊಳ್ಳುವುದು ನಮ್ಮ ಕೈಯಲ್ಲಿದೆ. ಅಥವಾ ಆ ಉದ್ದೇಶಗಳ ಸಾಧನೆಗಾಗಿ ದುಡಿಯದೆ,

ಹೆಸರಿಗೆ ಸ್ವಾತಂತ್ರ್ಯ ಬಂದರೂ ಶೋಕದಲ್ಲಿಯೇ ಮುಳುಗಿರುವುದೂ ನಮ್ಮ ಕೈಯಲ್ಲೇ ಇದೆ. ಇದೇ ನಮಗೆ ಇದುವರೆಗೆ ಲಭಿಸಿರುವ ಸ್ವಾತಂತ್ರ್ಯಕ್ಕೆ ಅರ್ಥ.

೫

ನಮ್ಮ ಸ್ವಾತಂತ್ರ್ಯಸಮರದ ಫಲವಾಗಿ ಈಗ ನಮಗೆ ಲಭಿಸಿರುವ ಜಯವು ಸಾಧಾರಣರ ಕಣ್ಣಿಗೆ ಸಣ್ಣದಾಗಿ ಕಾಣಬಹುದು. ಆದರೆ ವಿಚಾರಿಗಳು ಅದನ್ನು ಹಾಗೆ ಅಲ್ಲಗಳೆಯಲು ಸಾಧ್ಯವಿಲ್ಲ. ನಮ್ಮ ಹೋರಾಟದ ಪ್ರತೀಕವಾಗಿ ನಾವು ಹಿಡಿದಿದ್ದ **ಚರಖದ ಬಾವುಟ**ದಿಂದ ಬೆಳೆದುಬಂದ ಈ **ಚಕ್ರದ ಬಾವುಟ**ವನ್ನು ಮಂಡಿಸುವಾಗ ರಾಜ್ಯಾಂಗಸಭೆಯಲ್ಲಿ ಪಂಡಿತ ನೆಹರು ಅವರು ಹೇಳಿದುದನ್ನು ಈಗಲೂ ನೆನೆಸಿಕೊಳ್ಳುವುದು ಯೋಗ್ಯವಾಗಿದೆ.

"ಈ ನಮ್ಮ ವಿಜಯಕ್ಕೆ ಅನೇಕ ರೀತಿಗಳಲ್ಲಿ ವಿಕಾರವಾಗಿದೆ ಎಂಬುದನ್ನು ನೀವು ಮನಗಂಡಿರುವಂತೆಯೇ ನಾನೂ ಚೆನ್ನಾಗಿ ಕಂಡಿದ್ದೇನೆ. ಅದರಲ್ಲೂ ಈ ಕಳೆದ ಕೆಲವು ತಿಂಗಳಲ್ಲಿ, ಏನೇನೋ ನಡೆದುಹೋಗಿ, ನಮ್ಮ ಹೃದಯ ದುಃಖಕ್ಕೆ ಈಡಾಗಿ ಸಂಕಟಪಟ್ಟಿದೆ. ನಮ್ಮ ಈ ಅಕ್ಕರೆಯ ಮಾತೃಭೂಮಿಯ ಕೆಲವು ಭಾಗಗಳು ಇತರ ಭಾಗಗಳಿಂದ ಕತ್ತರಿಸಿಹೋಗಿ ಬೇರೆಯಾಗಿವೆ. ಲಕ್ಷಾಂತರ ಜನರು ಅಪರಿಮಿತವಾದ ದುಃಖಕ್ಕೀಡಾಗಿ, ಮನೆಯಿಲ್ಲದೆ ಅನಾಥರಂತೆ ತಬ್ಬಲಿಗಳಂತೆ ಅಲೆಯುತ್ತಿದ್ದಾರೆ. ನಾವು ಕಂಡಿರುವ ಇನ್ನೂ ಇತರ ಸಂಗತಿಗಳನ್ನು ಮರೆಯಲಾಗದಿದ್ದರೂ ಅದನ್ನು ಇಲ್ಲಿ ಪುನಃ ಆಡಬೇಕಾಗಿಲ್ಲ. ನಾವು ವಿಜಯಕ್ಕೂ ಗೆಲುವಿಗೂ ಹತ್ತಿರ ಬಂದಿರುವಾಗ, ಈಗಲೂ ಮುಂದೆಯೂ ಸಾಧಿಸಬೇಕಾದ ಮಹಾ ಸಮಸ್ಯೆಗಳು ಎದುರುಬಿದ್ದಿರುವಾಗ ಈ ದುಃಖ ನಮ್ಮ ಬೆನ್ನುಹತ್ತಿದೆ.

"ಆದರೆ ಈಗ ಆಗಿರುವುದರಲ್ಲಿ ಜಯವಿದೆ, ಗೆಲುವಿದೆ. ಒಂದು ಮಹಾಸಮರ್ಥವಾದ ಸಾಮ್ರಾಜ್ಯವು, ಈ ದೇಶದಲ್ಲಿ ತನ್ನ ಪ್ರಭುತ್ವವನ್ನು ವಿಜೃಂಭಿಸಿದ ಆಡಳಿತವು, ತನ್ನ ದಿನಗಳನ್ನು ತಾನೇ ಮುಗಿಸಿಕೊಂಡದ್ದು ಏನೂ ಸಣ್ಣ ವಿಷಯವಲ್ಲ. ನಾವು ಉದ್ದೇಶಿಸಿದ್ದ ಗುರಿಯಾದರೂ ಅದೇ. ಆ ಗುರಿಯನ್ನು ನಾವು ಪಡೆದಿದ್ದೇವೆ, ಅಥವಾ ಸದ್ಯದಲ್ಲೇ ಪಡೆಯುತ್ತೇವೆ. ಅದಕ್ಕೇನೂ ಸಂದೇಹವಿಲ್ಲ. ನಾವು ಬಯಸಿದ ರೂಪದಲ್ಲಿ ಅದನ್ನು ನಾವು ಪಡೆದಿಲ್ಲ, ಅಲ್ಲದೆ ನಮಗೆ ಇಷ್ಟವಾಗದ ಇತರ ಸಂಗತಿಗಳೂ ಅದರ ಜೊತೆಗೆ ಬಂದಿವೆ. ನಾವು ಕಂಡ

ಕನಸುಗಳು ನನಸಾಗುವುದು ತುಂಬ ವಿರಳ. ನಾವು ಯಾವ ಉದ್ದೇಶಗಳಿಂದ ಯಾವ ಗುರಿಯನ್ನಿರಿಸಿಕೊಂಡು ಹೊರಡುವೆವೋ ಅದನ್ನು ಒಬ್ಬ ವ್ಯಕ್ತಿಯು ಆಯುಷ್ಕಾಲದಲ್ಲಾಗಲಿ ಒಂದು ದೇಶದ ಜೀವಮಾನದಲ್ಲಾಗಲಿ ಸಂಪೂರ್ಣವಾಗಿ ಸಾಧಿಸಿ ಕಾಣುವುದು ತೀರ ವಿರಳ.

"ಉದಾಹರಣೆಗಳು ನಮ್ಮ ಮುಂದೆಯೇ ಇವೆ. ಅದಕ್ಕಾಗಿ ನಾವು ಬಹು ಹಿಂದಿನ ಭೂತಕಾಲಕ್ಕೆ ಹೋಗಬೇಕಾದುದಿಲ್ಲ, ಇದೇ ಈಗ ನಡೆದುದೇ ಇದೆ. ಕೆಲವು ವರುಷದ ಹಿಂದೆ ಒಂದು ಮಹಾಯುದ್ಧ ನಡೆಯಿತು; ಮಾನವಲೋಕಕ್ಕೆ ದಾರುಣವಾದ ದುಃಖವನ್ನು ತಂದ ಮಹಾಯುದ್ಧ.

"ಆ ಯುದ್ಧವನ್ನು ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಇತ್ಯಾದಿಗಾಗಿ ನಡೆಸಿದರು. ಸ್ವಾತಂತ್ರ್ಯಕ್ಕಾಗಿ ಪ್ರಜಾಪ್ರಭುತ್ವಕ್ಕಾಗಿ ನಿಂತವರು, ಅಥವಾ ಅದಕ್ಕಾಗಿ ನಿಂತೆವೆಂದು ಹೇಳಿದವರು, ಆ ಯುದ್ಧದಲ್ಲಿ ವಿಜಯಿಗಳಾದರು. ಆದರೆ, ಆ ಯುದ್ಧ ಇನ್ನೂ ಮುಗಿದಿಲ್ಲ, ಅಷ್ಟರೊಳಗೇ ಹೊಸ ಯುದ್ಧಗಳ ಮಾತು. ಮೂರುದಿನಗಳ ಹಿಂದೆ, ನಮ್ಮ ನೆರೆಯ ನಾಡಿನಲ್ಲಿ ರಾಷ್ಟ್ರನಾಯಕರ ಹೊಲಸುಕೊಲೆಯಾದುದನ್ನು ಕೇಳಿ, ಈ ಸಭೆ ಈ ದೇಶ ಈ ಜಗತ್ತು ದಿಗ್‌ಭ್ರಾಂತವಾಯಿತು. ಸಾಮ್ರಾಜ್ಯಶಕ್ತಿಯೊಂದು ಆಗ್ನೇಯ ಏಷ್ಯದ ಮಿತ್ರರಾಷ್ಟ್ರದ ಮೇಲೆ ಕೈಮಾಡಿದೆಯೆಂದು ಈ ದಿನದ ಪತ್ರಿಕೆಯಲ್ಲಿ ನೋಡಿದೆವು. ಸ್ವಾತಂತ್ರ್ಯವೆಂಬುದು ಇನ್ನೂ ಈ ಜಗತ್ತಿನಿಂದ ದೂರದಲ್ಲಿಯೇ ಇದೆ; ಎಲ್ಲ ರಾಷ್ಟ್ರಗಳೂ—ಕೆಲವು ಸ್ವಲ್ಪ ಹೆಚ್ಚಾಗಿ, ಕೆಲವು ಸ್ವಲ್ಪ ಕಡಿಮೆಯಾಗಿ—ಆ ಸ್ವಾತಂತ್ರ್ಯಕ್ಕಾಗಿ ಹೆಣಗುತ್ತಿವೆ. ಈಗ ಸದ್ಯದಲ್ಲಿ ನಾವು ಏನನ್ನು ಗುರಿಯಾಗಿರಿಸಿಕೊಂಡಿದ್ದೆವೋ ಅದನ್ನು ಯಥಾವತ್ತಾಗಿ ಸಾಧಿಸಿಲ್ಲದಿದ್ದರೆ, ಅದಕ್ಕಾಗಿ ಆಶ್ಚರ್ಯಪಡಬೇಕಾಗಿಲ್ಲ, ನಾಚಬೇಕಾಗಿಲ್ಲ.

"ಆದರೆ ನಮ್ಮ ಸಿದ್ಧಿ ಏನೂ ಸಣ್ಣದೆಂದು ನನಗೆನ್ನಿಸದು. ಇದು ತಕ್ಕಷ್ಟು ದೊಡ್ಡ ಸಿದ್ಧಿಯೇ, ಮಹಾಸಿದ್ಧಿಯೇ. ನಮಗೆ ಇಷ್ಟವಾಗದ ಇತರ ಸಂಗತಿಗಳು ಸಂಭವಿಸಿವೆ ಎಂಬ ಕಾರಣದಿಂದ ಯಾರೂ ಇದನ್ನು ಅಲ್ಲಗಳೆಯದಿರಲಿ. ನಾವು ಈ ಎರಡನ್ನೂ ಪ್ರತ್ಯೇಕವಾಗಿ ಇಟ್ಟಿರೋಣ.

"ಈ ವಿಶಾಲವಾದ ವಿಶ್ವದಲ್ಲಿ ಯಾವ ದೇಶವನ್ನಾದರೂ ನೋಡಿ. ಮಹಾಮಹಾ ಪ್ರಭುತ್ವಗಳಿಂದ ಹಿಡಿದು ಸಣ್ಣಪುಟ್ಟ ಪ್ರಭುತ್ವಗಳವರೆಗೂ ಯಾವುದನ್ನಾದರೂ ನೋಡಿ: ಭಯಂಕರವಾದ ಸಮಸ್ಯೆಗಳಿಂದ ತುಂಬಿ

ಲ್ಲದ ದೇಶ ಯಾವುದುಂಟು? ಒಂದಲ್ಲ ಒಂದು ರೀತಿಯಾಗಿ, ರಾಜಕೀಯವಾಗಿಯೋ ಆರ್ಥಿಕವಾಗಿಯೋ, ಕೈಗೆ ಸಿಕ್ಕದೆ ನುಣಿಚಿಕೊಳ್ಳುತ್ತಿರುವ ಸ್ವಾತಂತ್ರ್ಯಕ್ಕೋಸ್ಕರ ಶ್ರಮಿಸದಿರುವ ದೇಶ ಯಾವುದುಂಟು?

"ಆದಕಾರಣ ಭಾರತವನ್ನು ಈ ವಿಸ್ತಾರವಾದ ಸಂಬಂಧದಲ್ಲಿ ನೋಡಿ. ನಮಗೆ ಇಷ್ಟವಾಗದುದು ಆಗಿದೆ ಎಂಬ ಕಾರಣದಿಂದ ವೃಥಾ ಕುಗ್ಗುವುದು ಬೇಡ. ನಾವು ಈ ಹಿಂದೆ ಎಷ್ಟೋ ಅನಿಷ್ಟವಾದವುಗಳನ್ನು ಎದುರಿಸಿದ್ದೇವೆ, ಆದರೂ ಹಿಮ್ಮೆಟ್ಟಲಿಲ್ಲ; ಅದರಂತೆಯೇ ಈಗ ಇರುವುದಲ್ಲದೆ ಮುಂದೆ ಬರಬಹುದಾದ ಇತರ ಅನಿಷ್ಟಗಳನ್ನೂ ಎದುರಿಸೋಣ, ಕುಗ್ಗದೆ ಕೊರಗದೆ ಇರೋಣ. ಆದ್ದರಿಂದಲೇ ನಮ್ಮ ಸುತ್ತಮುತ್ತಿರುವ ಈ ಎಲ್ಲದರ ನಡುವೆ, ಯಾವ ರೀತಿಯ ಕುಗ್ಗು ಕೊರಗೂ ಇಲ್ಲದೆ, ಈ ರಾಷ್ಟ್ರವೂ ರಾಷ್ಟ್ರದ ಪ್ರಜೆಯೂ ಸಾಧಿಸಿರುವುದನ್ನು ನೆನೆದು ನಾನು ಅಭಿಮಾನದಿಂದ ವಂದಿಸಲು ಇಲ್ಲಿ ನಿಂತಿದ್ದೇನೆ.

"ಈ ಸಮಯದಲ್ಲಿ ನಮ್ಮ ಸಾಧನೆಯ ಸಂಕೇತವನ್ನು, ನಮ್ಮ ಸ್ವಾತಂತ್ರ್ಯದ ಸಂಕೇತವನ್ನು ನಾವು ಸ್ವೀಕರಿಸುವುದು ಧರ್ಮ, ಯುಕ್ತ. ಸ್ವಾತಂತ್ರ್ಯವು ತನ್ನ ಸಂಪೂರ್ಣ ಸ್ವರೂಪದಲ್ಲಿ ಬಹುಪಾಲಿನ ಮಾನವ ವರ್ಗದ ಕೈಗೆ ಸಿಕ್ಕದೆ ನುಣಿಚಿಕೊಳ್ಳುತ್ತಿರುವಂತೆ ನಮಗೂ ಸಿಕ್ಕದೆ ನುಣಿಚಿಕೊಳ್ಳುತ್ತಿದೆ. ಸ್ವಾತಂತ್ರ್ಯ ಎಂದರೇನು? ಸ್ವಾತಂತ್ರ್ಯದ ಹೋರಾಟ ಯಾವುದು? ಇದು ಮುಗಿಯುವುದು ಎಂದು?

"ನೀವು ಒಂದು ಹೆಜ್ಜೆ ಮುಂದೆಯಿಟ್ಟು ಏನನ್ನೋ ಸಾಧಿಸಿದರೆ, ಒಡನೆಯೆ ಅದರ ಮುಂದಿನ ಹೆಜ್ಜೆಗಳು ಎದುರಿಗೆ ಏಳುವುವು. ಒಂದೇ ಒಂದು ಮಾನವಜೀವ ಬಿಡುಗಡೆಯಿಲ್ಲದೆ ಇರುವವರೆಗೆ ಈ ದೇಶಕ್ಕಾಗಲಿ ಪ್ರಪಂಚಕ್ಕಾಗಲಿ ಸ್ವಾತಂತ್ರ್ಯವೆಂಬುದಿಲ್ಲ. ನಿರಾಹಾರ, ಹಸಿವು, ಬಟ್ಟೆಯ ಕೊರತೆ, ಬದುಕಿಗೆ ಬೇಕಾದುದರ ಕೊರತೆ, ಬೆಳವಣಿಗೆಗೆ ಬೇಕಾದ ಅವಕಾಶಗಳ ಕೊರತೆ—ಇವು ಒಂದೇ ಒಂದು ಗಂಡಿಗೆ, ಹೆಣ್ಣಿಗೆ, ಅಥವಾ ಮಗುವಿಗೆ ಈ ದೇಶದಲ್ಲಿ ಇರುವವರೆಗೂ ಸಂಪೂರ್ಣ ಸ್ವಾತಂತ್ರ್ಯ ಎಂಬುದಿಲ್ಲ. ಇದು ಮಹಾ ಅಗಾಧವಾದ ಕಾರ್ಯವಾದುದರಿಂದ ನಾವು ಇದನ್ನು ಸಾಧಿಸಲಾಗುತ್ತದೋ ಇಲ್ಲವೋ. ಆದರೂ ನಮ್ಮ ಕೈಯಲ್ಲಿ ಎಷ್ಟು ಆಗುತ್ತದೋ ಅಷ್ಟನ್ನೂ ಮಾಡಿ, ನಮ್ಮ ಉತ್ತರಾಧಿಕಾರಿಗಳಿಗೆ, ಅವರು ಬಂದಾಗ, ಹೋಗುವುದಕ್ಕೆ ಇನ್ನಷ್ಟು ಸುಲಭವಾದ ಮಾರ್ಗವನ್ನು ಕೊಟ್ಟು ಹೋಗುವೆವೆಂದು ನನ್ನ ಆಸೆ. ಆದರೆ ಆ

ಸ್ವಾತಂತ್ರ್ಯದ ಮಾರ್ಗಕ್ಕೆ ಮುಕ್ತಾಯವಿಲ್ಲ. ನಾವು ನಮ್ಮ ಅಹಂಕಾರದಲ್ಲಿ ಕೆಲವು ಸಲ ಪರಿಪೂರ್ಣತೆಯನ್ನು ಗುರಿಯಾಗಿ ಇರಿಸಿಕೊಳ್ಳುತ್ತೇವೆಯಾದರೂ ಆ ಪರಿಪೂರ್ಣತೆ ಕೈವಶವಾಗುವುದಿಲ್ಲ. ಆದರೆ ಸಾಕಾದಷ್ಟು ಕಷ್ಟಪಟ್ಟರೆ ನಾವು ಹೆಜ್ಜೆಹೆಜ್ಜೆಯಾಗಿ ಅದರ ಹತ್ತಿರ ಸಾರಿ, ಪ್ರಜೆಗಳ ಸುಖವನ್ನೂ ಉನ್ನತಿಯನ್ನೂ ಅನೇಕ ವಿಧಗಳಲ್ಲಿ ವೃದ್ಧಿಗೊಳಿಸಬಹುದು."

ಪಂಡಿತ ನೆಹರು ಅವರು "ಕ್ಷುದ್ರವಾದ ಹೃದಯದೌರ್ಬಲ್ಯವನ್ನು ತೊರೆದು ಏಳಿರಿ. ನೀವು ಪರಂತಪರು." ಎಂದು ಈ ಮಾತುಗಳನ್ನು ಆಡಿ ಸ್ವತಂತ್ರಭಾರತದ ಅಶೋಕಚಕ್ರಧ್ವಜವನ್ನು ನಾಡಿಗೆ ಒಪ್ಪಿಸಿದ ಕೆಲವೇ ವಾರಗಳಲ್ಲಿ, ೧೯೪೭ ರ ಆಗಸ್ಟ್ ೧೫ ರ ಉದಯದೊಡನೆ ಭಾರತವು ರಾಜಕೀಯವಾಗಿ ಸ್ವತಂತ್ರವಾಯಿತು.

ಆದರೇನು ? ಭಾರತದ ದುರ್ದೈವ ಅಸ್ತಮಯವಾಗಲಿಲ್ಲ. ಮೊದಲು ಆ ಕಾಶ್ಮೀರದ ಕದನ. ಕಡೆಗೆ ಮಹಾತ್ಮರ ಅರ್ಥವಿಲ್ಲದ ಕೊಲೆ. ಈಗ ಈ ಹೈದರಾಬಾದಿನ ಅನಿಶ್ಚಿತ ಪರಿಸ್ಥಿತಿ. ಆದರೂ ಈ ಅನಾಹುತಗಳ ಅಂತರದಲ್ಲಿಯೇ ದೇಶವು ಸಾಧಿಸಿರುವ ಪ್ರಗತಿಯಾದರೂ ಏನೂ ಸಣ್ಣದಲ್ಲ.

ಸುಮಾರು ನೂರೈವತ್ತು ವರುಷಗಳಿಗೆ ಮೇಲ್ಪಟ್ಟು ನಮ್ಮನ್ನು ಆಳುತ್ತಿದ್ದವರು ಈಗ ನಮ್ಮನ್ನು ನಮ್ಮ ಪಾಡಿಗೆ ಬಿಟ್ಟುಹೋಗಿದ್ದಾರೆ, ನಮ್ಮ ದೇಶವನ್ನು ನಮಗೆ ಕೊಟ್ಟುಹೋಗಿದ್ದಾರೆ. ಅವರ ಕೈಯಿಂದ ಬರುವಾಗ ಈ ದೇಶ ಮುಕ್ಕಾಗಿ ಒಂದೆರಡು ಅಂಗ ಕಳೆದುಕೊಂಡು ಬಂದಿರುವುದು ನಿಜವಾದರೂ, ಅದು ಗತ್ಯಂತರವಿಲ್ಲದೆ ನಾವೇ ಒಪ್ಪಿ ಮಾಡಿಕೊಂಡದ್ದು. ಬಂದಿರುವುದನ್ನಾದರೂ ಒಂದು ಉಂಡೆಯಾಗಿ ಉಳಿಸಿಕೊಳ್ಳೋಣವೆಂದು ಸಂತತವಾದ ಪ್ರಯತ್ನಗಳು ನಡೆಯುತ್ತಿವೆ. ಸಂಸ್ಥಾನಗಳೆಂಬ, ಇತರ ಭಾರತವೆಂಬ ವ್ಯವಹಾರದ ವಿಂಗಡಣೆ ಇದ್ದರೂ ಭಾರತವನ್ನು ಏಕತಂತ್ರಕ್ಕೆ ತಂದಹೊರತು ಭದ್ರತೆಯಿಲ್ಲವೆಂದು, ಹಿರಿಯರು ಅದಕ್ಕಾಗಿ ದುಡಿಯುತ್ತಿದ್ದಾರೆ. ಆದರೆ ಈ ಏಕತೆಗೆ ಅನೇಕ ಅಡ್ಡಿಗಳನ್ನೂ ವಿಘ್ನಗಳನ್ನೂ ನಮ್ಮವರೇ ತಂದೊಡ್ಡುತ್ತಿದ್ದಾರೆ ; ಕೆಲವರು ಪರರು ಇದಕ್ಕೆ ಪ್ರೋತ್ಸಾಹದ ಮಾತನ್ನಾಡಿ ಧೂಪ ಹಾಕುತ್ತಿದ್ದಾರೆ. ಇಷ್ಟಾದರೂ ಪುಡಿಪುಡಿ ಸಂಸ್ಥಾನಗಳನ್ನೆಲ್ಲಾ ಒಟ್ಟುಗೂಡಿಸಿ ದೊಡ್ಡಪ್ರಾಂತ ಮಾಡಿದ್ದಾರೆ, ದೊಡ್ಡ ಸಂಸ್ಥಾನಗಳಲ್ಲಿ ಪ್ರಾಯಶಃ ಎಲ್ಲವೂ

ಭಾರತದ ಒಕ್ಕೂಟಕ್ಕೆ ಹೊಂದಿಕೊಳ್ಳುವಂತೆ ಮಾಡಿದ್ದಾರೆ. ಉಳಿದಿರುವುದು ಇಷ್ಟರಲ್ಲಿಯೇ ಸರಿಹೋಗುವುದೆಂದು ಹಾರೈಸೋಣ.

ದೇಶದ ಒಳಗೆ ಈ ಏಕತೆಯನ್ನು ಸ್ಥಾಪಿಸಲು ಪ್ರಯತ್ನ ನಡೆಯುತ್ತಿರುವುದರ ಪಕ್ಕದಲ್ಲೇ ಜಗತ್ತಿನ ಇತರ ರಾಷ್ಟ್ರಗಳೊಡನೆ ಮೈತ್ರಿಯನ್ನು ಬೆಳೆಸುವ ಮಹಾ ಕಾರ್ಯವೂ ನಡೆಯುತ್ತಿದೆ.

ಈ ಎರಡೂ ಪ್ರಯತ್ನಗಳ ಫಲವಾಗಿ ದೇಶದಲ್ಲಿ ಶಾಂತಿ ನೆಲಸಿದರೆ, ಆಗ ಮಾತ್ರ ದೇಶ ಸುಭಿಕ್ಷವಾದೀತು. ದುಃಖಭಾರದಿಂದ ಕೊರಗುತ್ತಿರುವ ಭಾರತ ಅಶೋಕಭಾರತವಾಗಿ ಹಿಗ್ಗಿ ಹಿರಿಮೆ ಪಡೆದೀತು.

ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ನಗರ.